# ಕುವೆಂಪು ಮತ್ತು ಕಾರಂತರ ಕಾದಂಬರಿಗಳಲ್ಲಿ ದಲಿತ ಪ್ರಜ್ಞೆ
## - ತೌಲನಿಕ ಅಧ್ಯಯನ

ಈ ನಿಬಂಧವನ್ನು ಕನ್ನಡ ವಿಶ್ವವಿದ್ಯಾನಿಲಯಕ್ಕೆ ಎಂ.ಫಿಲ್.(ಕನ್ನಡ) ಪದವಿಗಾಗಿ ಅರ್ಪಿಸಲಾಗಿದೆ



**ಸಂಶೋಧಕ**

ವಸಂ[illegible]

ನೋಂದಣಿ ಸಂಖ್ಯೆ KRSMKS-00[illegible]

**ಮಾರ್ಗದರ್ಶಕರು**

ಪ್ರೊ. ಶಿವರಾಮ ಕಾಡನಕುಪ್ಪೆ



ಕರ್ನಾಟಕ ಸಂಘ (ರಿ), ಮಂಡ್ಯ
ಎಂ.ಎಲ್. ಶ್ರೀಕಂಠೇಗೌಡ ಸಂಶೋಧನಾ ಕೇಂದ್ರ
(ಕನ್ನಡ ವಿ.ವಿ.ಯಿಂದ ಮಾನ್ಯತೆ ಪಡೆದಿದೆ)
ಮಂಡ್ಯ
೨೦೦೮-೦೯

# ಕುವೆಂಪು ಮತ್ತು ಕಾರಂತರ ಕಾದಂಬರಿಗಳಲ್ಲಿ ದಲಿತ ಪ್ರಜ್ಞೆ
## ~ ತೌಲನಿಕ ಅಧ್ಯಯನ

ಈ ನಿಬಂಧವನ್ನು ಕನ್ನಡ ವಿಶ್ವವಿದ್ಯಾನಿಲಯಕ್ಕೆ ಎಂ.ಫಿಲ್.(ಕನ್ನಡ) ಪದವಿಗಾಗಿ ಅರ್ಪಿಸಲಾಗಿದೆ



ಸಂಶೋಧಕ

**ವಸಂತ.ಜಿ**

ನೋಂದಣಿ ಸಂಖ್ಯೆ KRSMKS-00೩೫೯

ಮಾರ್ಗದರ್ಶಕರು

**ಪ್ರೊ. ಶಿವರಾಮ ಕಾಡನಕುಪ್ಪೆ**

**ಕರ್ನಾಟಕ ಸಂಘ (ರಿ), ಮಂಡ್ಯ**
ಎಂ.ಎಲ್. ಶ್ರೀಕಂಠೇಗೌಡ ಸಂಶೋಧನಾ ಕೇಂದ್ರ
(ಕನ್ನಡ ವಿ.ವಿ.ಯಿಂದ ಮಾನ್ಯತೆ ಪಡೆದಿದೆ)
ಮಂಡ್ಯ
೨೦೦೮-೦೯

## ದೃಢೀಕರಣ ಪತ್ರ

"ಕುವೆಂಪು ಮತ್ತು ಕಾರಂತರ ಕಾದಂಬರಿಗಳಲ್ಲಿ ದಲಿತ ಪ್ರಜ್ಞೆ - ತೌಲನಿಕ ಅಧ್ಯಯನ" ಎಂಬ ವಿಷಯದ ಮೇಲೆ ಈ ನಿಬಂಧವನ್ನು ಕನ್ನಡ ವಿಶ್ವವಿದ್ಯಾನಿಲಯದ **ಎಂ.ಫಿಲ್. (ಕನ್ನಡ)** ಪದವಿಗೆ ವಿದ್ಯಾರ್ಥಿಯಾದ ವಸಂತ.ಜಿ. ಯವರು ನನ್ನ ಮಾರ್ಗದರ್ಶನ ಹಾಗೂ ಮೇಲ್ವಿಚಾರಣೆಯಲ್ಲಿ ಬರೆದು ಒಪ್ಪಿಸುತ್ತಿದ್ದಾರೆಂದೂ ಹಾಗೂ ಈ ವಿಷಯದ ಬಗ್ಗೆ ಬೇರೆ ಯಾರಿಗೂ ನಾನು ಮಾರ್ಗದರ್ಶನ ಮಾಡಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

**ಮಾರ್ಗದರ್ಶಕರ ಸಹಿ.**

**(ಪ್ರೊ. ಶಿವರಾಮು ಕಾಡನಕುಪ್ಪೆ)**
**ಪ್ರಾಂಶುಪಾಲರು, ಕನ್ನಡ ವಿಭಾಗ**
**ವಿದ್ಯಾವರ್ಧಕ ಪ್ರಥಮದರ್ಜೆ ಕಾಲೇಜು,**
**ಮೈಸೂರು**

**ದಿನಾಂಕ :** 30/9/09
**ಸ್ಥಳ :** ಮೈಸೂರು

# ಪ್ರಮಾಣ ಪತ್ರ

"ಕುವೆಂಪು ಮತ್ತು ಕಾರಂತರ ಕಾದಂಬರಿಗಳಲ್ಲಿ ದಲಿತ ಪ್ರಜ್ಞೆ – ತೌಲನಿಕ ಅಧ್ಯಯನ" ಎಂಬ ವಿಷಯದ ಮೇಲೆ ಈ ನಿಬಂಧವನ್ನು ಪ್ರೊ. ಶಿವರಾಮ ಕಾಡನಕುಪ್ಪೆ ರವರ ಮಾರ್ಗದರ್ಶನದಲ್ಲಿ ನನ್ನ ಸಂಶೋಧನೆಯ ಫಲವಾಗಿ ರಚಿಸಲ್ಪಟ್ಟು ಕನ್ನಡ ವಿಶ್ವವಿದ್ಯಾನಿಲಯದ **ಎಂ.ಫಿಲ್. (ಕನ್ನಡ)** ಪದವಿಗೆ ಅರ್ಪಿಸುತ್ತಿದ್ದೇನೆ.

ಈ ನಿಬಂಧವನ್ನು ಹಿಂದಿನ ವರ್ಷಗಳಲ್ಲಿ ಯಾರೂ ಇಲ್ಲಿಯವರೆಗೆ ಯಾವುದೇ ವಿಶ್ವವಿದ್ಯಾನಿಲಯಕ್ಕೆ ಒಪ್ಪಿಸಿಲ್ಲವೆಂದು ನಾನು ಇಲ್ಲಿ ಪ್ರಮಾಣೀಕರಿಸುತ್ತಿದ್ದೇನೆ.

ವಸಂತ.ಜಿ.

**ವಸಂತ.ಜಿ.**

**ದಿನಾಂಕ : ೩೦.೦೯.೨೦೦೯** | **ಎಂ.ಫಿಲ್. ವಿದ್ಯಾರ್ಥಿ**

**ಸ್ಥಳ : ಮಂಡ್ಯ** | **ನೋಂದಣಿ ಸಂಖ್ಯೆ:** KRSMKS-**೦೦೩೪೯**

# ಕುವೆಂಪು ಮತ್ತು ಕಾರಂತರ ಕಾದಂಬರಿಗಳಲ್ಲಿ ದಲಿತ ಪ್ರಜ್ಞೆ
## ~ ತೌಲನಿಕ ಅಧ್ಯಯನ



## ಪರಿವಿಡಿ

## ಅಧ್ಯಾಯ -೧

## ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಸಾಹಿತ್ಯ ರಚನೆಯ ಕ್ಷಣಗಳಲ್ಲಿ ಕವಿಯ ಮನಃಸ್ಥಿತಿಯು ಹೇಗಾದರೂ ಇರಲಿ, ಉಳಿದಂತೆ ಅವನೊಬ್ಬ ಸಮಾಜ ಜೀವಿ. ವ್ಯಕ್ತಿ ಮತ್ತು ಸಮಾಜಗಳೆರಡೂ ಜೀವಂತ ವ್ಯವಸ್ಥೆಗಳಾದುದರಿಂದ ಅವುಗಳು ಪರಸ್ಪರ ಪ್ರಭಾವ ಬೀರದೆ ಇರಲಾರವು. ಉಪ್ಪುನೀರಿನ ನಡುವೆ ಬದುಕುವ ಮೀನಿಗೆ, ನೀರಿನ ಉಪ್ಪುತನ ಒಂದು ಗಮನೀಯವಾದ ಸಂಗತಿಯೆನಿಸುವುದಿಲ್ಲ. ಹಾಗೆಯೇ ತಾನು ಅತ್ಯಂತ ಖಾಸಗಿ, ವೈಯಕ್ತಿಕ ಎಂದು ತಿಳಿದಿರುವ ಸತ್ಯಗಳು ಕೂಡ ತನ್ನ ಸಾಮಾಜಿಕ ಪರಿಸರದ ಫಲಿತಗಳೇ ಎಂಬುದನ್ನು ಕವಿಯು ಗ್ರಹಿಸದಿದ್ದರೂ ಅದು ಸತ್ಯವೇ. ಸಮಾಜವು ಎಲ್ಲಡೆ ಸುರಿಯುವ ಮಳೆಯಾದರೆ, ವೈಯಕ್ತಿಕತೆಯು ಬೀಜದ ಗುಣವನ್ನು ಅವಲಂಬಿಸಿ ಮೇಲೆ ಜಿಗಿಯುವ ಬೆಳೆ. ಆದ್ದರಿಂದ ಒಂದೇ ಪರಿಸರವು ಹಲವು ಕವಿಗಳಲ್ಲಿ ಅವರದೇ ಆದ ವಿಶಿಷ್ಟ ಅಭಿವ್ಯಕ್ತಿಯನ್ನು ಪ್ರೇರಿಸಬಹುದು.

ತನ್ನ ಕಾಲದ ಸಾಮಾಜಿಕ ಸ್ಥಿತಿ-ಗತಿಗಳ ಬಗ್ಗೆ ಕವಿ ಮತ್ತು ಅವನ ತಕ್ಷಣದ ಪರಿಸರವು ತಳೆಯುವ ನಿಲುವು ಮೌಲಿಕವಾಗುತ್ತದೆ.

ಸಾಹಿತ್ಯವು ಸಮಾಜದ ಪ್ರತಿಬಿಂಬವೂ, ಗತಿಬಿಂಬವೂ ಆಗಿರುವುದರಿಂದ ಪ್ರತಿಯೊಬ್ಬ ಸಾಹಿತಿಯು ತನ್ನ ಸಮಕಾಲೀನ ಬದುಕಿನ ಸಂವೇದನೆಗಳನ್ನು ಸಮಾಜದ ಮಣ್ಣಿನ ಗುಣಗಳನ್ನು ಅರಗಿಸಿಕೊಂಡು ಅಭಿವ್ಯಕ್ತಿಗೂಳಿಸುತ್ತಾನೆ. ಪಾಶ್ಚಾತ್ಯ ವಿಮರ್ಶಕನೊಬ್ಬನು ಅಭಿಪ್ರಾಯ ಪಡುವಂತೆ ಶ್ರೇಷ್ಠ ಕೃತಿಯ ನಿರ್ಮಾಣದಲ್ಲಿ ಆ ಹಿನ್ನಲೆಯ ಸಮಾಜದ ಉತ್ಕೃಷ್ಟತೆ ಪ್ರಧಾನ ಪಾತ್ರ ವಹಿಸುತ್ತದೆ.

ಭಾರತೀಯ ಸಾಮಾಜಿಕ ಬದುಕನ್ನು ಅವಲೋಕಿಸಿದಾಗ ವೇದಕಾಲದಿಂದಲೂ ಮಾನವ ವಿವಿಧ ವರ್ಗಗಳಲ್ಲಿ ತನ್ನ ಸ್ಥಾನ ನಿಗದಿಪಡಿಸಿಕೊಂಡು ಬದುಕುತ್ತಿದ್ದಾನೆ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರಾದಿ ವರ್ಗಗಳಲ್ಲಿ ಬೆಳೆದು ಬಂದ ತಾರತಮ್ಯ ಜೀವನ ಹಲವು ರೂಪಗಳಿಂದ ಯುಗಾಂತರದ ಹೆಜ್ಜೆಗಳಲ್ಲಿ ಇಂದಿಗೂ ನಡೆದು ಬರುತ್ತಿದೆ. ಪ್ರಾರಂಭದ ಅವಧಿಯಲ್ಲಿ ತಾರತಮ್ಯದ ಮೇಲ್ವರ್ಗದಲ್ಲಿದ್ದ ವೈಷ್ಣವ ವರ್ಗ ಸಾಹಿತ್ಯಿಕ ಸ್ವಾಮ್ಯವನ್ನು ಹೊಂದಿ ತಮ್ಮ ಹೊರತಾದ ಬದುಕಿನ ಕಲ್ಪನೆಯನ್ನೆ ಇಲ್ಲವಾಗಿಸಿತು.

ಪಂಪ ರನ್ನಾದಿ ರಾಜಾಶ್ರಿತ ಕವಿಗಳು ಕ್ಷಾತ್ರ ಧರ್ಮಕ್ಕೆ ಪ್ರಾಶಸ್ತ್ಯ ಕೊಟ್ಟು ರಾಜರ ಕಥೆಯನ್ನೆ ವಸ್ತುವಾಗಿಟ್ಟು ಬರೆದರು. ನಂತರ ಕನ್ನಡದ ಸಾಮಾಜಿಕ ಬದುಕಿನ ಹೊಸ ಆಯಾಮವನ್ನು ಆ ಮೂಲಕ ನವೀನ ಸಾಹಿತ್ಯಿಕ ದೃಷ್ಟಿಕೋನಗಳನ್ನು ಕೊಟ್ಟಂತಹ ವಚನಕಾರರು ತಾರತಮ್ಯವನ್ನು ಪ್ರಶ್ನಿಸುತ್ತಾ ಅಸ್ಪೃಶ್ಯಪರವಾದ ಮಾನವೀಯ ನೆಲೆಯ ಚಿಂತನೆಗಳನ್ನು ಮಾಡುವುದರ ಜೊತೆಗೆ ಸ್ವತಃ ಆ ವರ್ಗಕ್ಕೆ ಸೇರಿದ ಜನರಿಗೆ ಅವಕಾಶ ಮಾಡಿಕೊಟ್ಟರು, ದಲಿತ ಎಂಬ ಹಣೆಪಟ್ಟಿ ಇಲ್ಲವಾದರೂ ನಿಜವಾದ ದಲಿತೀಯ ಚಿಂತನೆಗಳು ಕಂಡುಬಂದಿರುವುದು ವಚನ ಸಾಹಿತ್ಯದಲ್ಲಿ.

ನಂತರ ಬಂದ ದಾಸ ಸಾಹಿತ್ಯವು ಕೂಡ ಇಂತಹ ಅಸಮಾನಾಧಾರಿತ ಬದುಕಿನ ವೈರುಧ್ಯಗಳನ್ನು ಟೀಕಿಸುತ್ತ ಮಾನವೀಯ ಪರವಾದ ನಿಲುವುಗಳಿಂದ ವಿಶೇಷ ಅನಿಸುತ್ತದೆ. ಆದರೆ ಈ ಎಲ್ಲಾ ಕಾಲದ ಸಾಹಿತ್ಯದಲ್ಲಿ ದಲಿತ ಜೀವನದ ಬಾಹ್ಯ ಸ್ವರೂಪದ ಅಲ್ಪ ಅಭಿವ್ಯಕ್ತಿಯನ್ನಷ್ಟೆ ಕಾಣಬಹುದು. ಆಧುನಿಕ ಕನ್ನಡ ಸಾಹಿತ್ಯವು ಕಳೆದ ೧೫೦ ವರ್ಷಗಳಲ್ಲಿ ತೀವ್ರ ಚಲನಶೀಲತೆಯನ್ನು ಸಾಮಾಜಿಕ ಸ್ಪಂದನವನ್ನು ಕಂಡಿದೆ. ಹೊಸಗನ್ನಡದ ನವೋದಯ ಪಂಥವೂ, ಪ್ರಕೃತಿಪ್ರಿಯತೆ, ಆಧ್ಯಾತ್ಮಿಕತೆ, ದೇಶಾಭಿಮಾನ, ನಾಡುನುಡಿಯ ಅಭಿಮಾನ, ಮಧ್ಯಮ ವರ್ಗದ ಮಾನವ ಬದುಕಿನ ಸೂಕ್ಷ್ಮಾವಲೋಕನ, ಸ್ವಾತಂತ್ರ್ಯ ಪೂರ್ವ ಆದರ್ಶಗಳು, ಹಂಬಲಿಕೆ ಇವೆ ಮೊದಲಾದ ಲಕ್ಷಣಗಳೊಂದಿಗೆ ಪ್ರಧಾನವಾಗಿ ಸಾಹಿತ್ಯ ರಚನೆಯನ್ನು ಪ್ರಾರಂಭಿಸಿತು. ನಂತರ ಬಂದ ಪ್ರಗತಿಶೀಲ ಪಂಥವು ಕೈಗಾರಿಕ ಕ್ರಾಂತಿಯ ಪ್ರಭಾವದಿಂದ ಸಮಾಜವಾದದ, ಸಮತಾವಾದಗಳಂತಹ ವಿಶಾಲ ಪರಿಕಲ್ಪನೆಗಳ ಹಿನ್ನಲೆಯಲ್ಲಿ ಸಾಹಿತ್ಯ ರಚನೆಗೆ ತೊಡಗಿಸಿಕೊಂಡಿತು.

ಪಾಶ್ಚಾತ್ಯ ನವ್ಯ ಸಂಪ್ರದಾಯದ ಪ್ರಭಾವಕ್ಕೆ ಒಳಗಾದ ಕನ್ನಡ ನವ್ಯ ಪಂಥವು ಮಾನಸಿಕ ನೆಲೆಯ ಅಭಿವ್ಯಕ್ತಿಗೆ ಪ್ರಾಶಸ್ತ್ಯ ಕೊಟ್ಟಿದ್ದರಿಂದ ಏಕಾಂಗಿತನ, ಅನಾಥಪ್ರಜ್ಞೆ, ವೈಯಕ್ತಿಕ ವಿಕ್ಷಿಪ್ತತೆ, ಲೈಂಗಿಕ ಮುಕ್ತತೆ, ಅಪರಾಧಿ ಪ್ರಜ್ಞೆ ಇವೆ ಮೊದಲಾದ ಗುಣಲಕ್ಷಣಗಳನ್ನು ತನ್ನ ಅಭಿವ್ಯಕ್ತಿಯ ಭಿತ್ತಿಯಲ್ಲಿ ಚಿತ್ರಿಸಿತು. ೭೦ ರ ದಶಕದ ನಂತರ ನವ್ಯದ ಪ್ರಭಾವ ಇಳಿಮುಖವಾಗುತ್ತಿದ್ದಂತಹ ಸಂದರ್ಭದಲ್ಲಿ ಕನ್ನಡದ ಮಣ್ಣಿನ ಗುಣವನ್ನು ದೇಶೀ ಸತ್ವದ ಪ್ರತಿಪಾದನೆಗಾಗಿ ದಲಿತ ಸಾಹಿತ್ಯ ಹುಟ್ಟಿಕೊಂಡಿತು. ಸಮಾಜದ ಕಡೆಯ ವರ್ಗದಲ್ಲಿದ್ದ ದಲಿತ ಸಮೂಹದ ನೋವು, ಹತಾಶೆ, ಅಸಹಾಯಕತೆಗಳು ಸಾಹಿತ್ಯಿಕ ಅಭಿವ್ಯಕ್ತಿ ಪಡೆಯತೊಡಗಿದವು. ದಲಿತ ತಾನು ದಲಿತ ಜೀವನದ ಪ್ರತಿನಿಧಿಯಾಗಿ ಅನುಭವಿಸಿದ ನೋವುಗಳ ಅಭಿವ್ಯಕ್ತಿಯೇ ನಿಜವಾದ ದಲಿತ ಸಾಹಿತ್ಯ ಎಂದು ಕರೆಯಲ್ಪಟ್ಟಿತು. ದಲಿತ ಸಾಹಿತಿ ಒಂದು ಸಮೂಹದ ಪ್ರತಿನಿಧಿಯಾಗಿ ನಿಂತು ಇಡೀ ಜನಾಂಗದ ವಿವಿಧ ಜೀವನ ಮುಖಗಳನ್ನು ತನ್ನ ಅನುಭವದ ನೆಲೆಯಲ್ಲಿ ನೈಜವಾಗಿ ಅಭಿವ್ಯಕ್ತಿಸುವಂತಹ ಅವಕಾಶ ಲಭ್ಯವಾಯಿತು.

ಪರಿಣಾಮವಾಗಿ ಪರಂಪರಾಗತವಾಗಿ, ಅಜ್ಞಾತವಾಗಿ, ಅಪ್ರಜ್ಞರಾಗಿ, ದಾಸ್ಯತನದಲ್ಲಿ ಬದುಕಿದ್ದ ದಲಿತ ಜೀವನದ ತಲಸ್ಪರ್ಶಿ ಚಿತ್ರಣವನ್ನು ಕೊಡುವುದರ ಜೊತೆಗೆ ಅವನು ಇರುವ ಸ್ಥಿತಿ, ಪಡೆಯಬೇಕಾಗಿರುವ ಅವಕಾಶಗಳು, ನಿರ್ವಹಿಸಬೇಕಾಗಿರುವ ಜೀವನ ಮಟ್ಟ, ತನ್ನ ಜೀವನ ಕ್ರಮದ ಬಗೆಗಿನ ಅವನ ಚಿಂತನೆಗಳ ಮೇಲೆ ಹೊಸಬೆಳಕು ಚೆಲ್ಲುವ ಕಾರ್ಯ ದಲಿತ ಸಾಹಿತ್ಯದ ಅಭಿವ್ಯಕ್ತಿ ಮಾರ್ಗವಾಯಿತು.

ಅಸ್ಪೃಶ್ಯ ವರ್ಗದಿಂದ ಬಂದ ಪ್ರಖ್ಯಾತ ಬರಹಗಾರರಾದ ದೇವನೂರ ಮಹಾದೇವರು ಈ ಸಾಹಿತ್ಯದ ಅನನ್ಯತೆಯನ್ನು ಪ್ರತ್ಯೇಕವಾದ ಪರಿಭಾಷೆಯಲ್ಲಿ ಹೇಳಿದ್ದಾರೆ. "ನಾನು ಅಂಥ ಕತ್ತಲ ರಾಜ್ಯದಿಂದ ಬಂದಂಥವನು. ಕಲಾ ಮಾಧ್ಯಮದಲ್ಲಿ ನಾನು ಇದುವರೆಗೆ ಬರೆದಿರುವುದು ನಮ್ಮ ರಾಜ್ಯದ ಮನುಷ್ಯನ ಆರೇಳು ಬೆರಳುಗಳು, ಹೆಚ್ಚೆಂದರೆ ಒಂದು ಹಸ್ತ ಇದ್ದೀತು. ಅದಷ್ಟೇ ಕನ್ನಡ ಸಾಹಿತ್ಯದ ಗತಿಯನ್ನು ಅಲ್ಲಾಡಿಸುವಲ್ಲಿ ತನ್ನ ಪ್ರಮಾಣಕ್ಕಿಂತ ಹೆಚ್ಚಾಗಿ ಅಲ್ಲಾಡಿಸಿದೆ. ಒಂದೆರಡು ಬೆರಳು ಹಸ್ತಕ್ಕೆ ಇಷ್ಟಾಗುವುದಾದರೆ, ಕತ್ತಲ ರಾಜ್ಯದ ಇಡೀ ಮನುಷ್ಯ ಮಾತಾಡುವುದಾದರೆ ಅದರಿಂದ ಉಂಟಾಗುವ ಬದಲಾವಣೆಯು ನನ್ನ ಕಲ್ಪನೆಗೆ ಎಟುಕದಷ್ಟಾಗಬಹುದು. ಈ ಬದಲಾವಣೆಗಾಗಿ ಈ ಮನುಷ್ಯನ ನುಡಿಗೆ ನುಡಿಕೊಡಲು ನೂರಾರು ಜನರು ಹುಟ್ಟಬೇಕಾದೀತು. ಒಂದು ಆಂದೋಲನ ಇದನ್ನು ಕಾಣಿಸಬಹುದೇನೋ?" ಹೀಗೆ ದಲಿತ ಸಾಹಿತ್ಯವು ಜನಪರವಾಗಿದ್ದು ತನ್ನದೇ ಕಾರಣಗಳಿಂದ ವಿಶಿಷ್ಟವೂ ಅನನ್ಯವೂ ಆಗಿದೆ.

ದಲಿತರ ಶೋಷಣೆಯ ಎಳೆಎಳೆಯಾದ ಚಿತ್ರಣವನ್ನು ಕೊಡುವುದರ ಜೊತೆಗೆ ಪ್ರತಿಭಟನಾತ್ಮಕವಾದ ಸಾಹಿತ್ಯವೂ ನಿರ್ಮಾಣವಾಗತೊಡಗಿತು. "ದಲಿತರು ಬರುವರು ದಾರಿ ಬಿಡಿ, ದಲಿತರ ಕೈಗೆ ರಾಜ್ಯ ಕೊಡಿ" ಎಂದು ತಮ್ಮ ಅವಕಾಶಕ್ಕಾಗಿ ಪ್ರಶ್ನಿಸುವ ವಿಚಾರವಂತಿಕೆಯನ್ನು ದಲಿತ ಸಾಹಿತ್ಯ ಬೆಳೆಸತೊಡಗಿತು. ಅಲ್ಲದೇ ಹಸಿವಿನಿಂದ ಸತ್ತವರಿಗೆ, ಸೈಜುಗಲ್ಲು ಹೊತ್ತವರಿಗೆ, ಪರಮಾತ್ಮನ ಹೆಸರಿನಲ್ಲಿ ಪರಮಾನ್ನ ಉಂಡ ಜನಕ್ಕೆ ಬೂಟು ಮೆಟ್ಟು ಹೊಲೆದ ತನ್ನ ಜನಾಂಗ ಜೀವನಕ್ಕೆ ದಲಿತಕವಿ ಮರುಗುತ್ತಾನೆ, ಮತ್ತಲ್ಲೇ ಕ್ರಾಂತಿಗೀತೆಯಾಡುತ್ತಾನೆ. ಇಂತಹ ಶೋಷಕರನ್ನು ಹೊಡೆದು ಹಾಕಿದ ದಿನವೇ ನಿಜವಾದ ಹಬ್ಬವೆಂದು ಸಿಟ್ಟಿಗೇಳುತ್ತಾನೆ. ಹೀಗೆ ಆಧುನಿಕ ಸಾಹಿತ್ಯದಲ್ಲಿ ದಲಿತ ಜನಾಂಗೀಯ ಅಭಿವ್ಯಕ್ತಿ ದಲಿತ ಸಾಹಿತ್ಯದ ಹೆಸರಿನಲ್ಲಿ ತನ್ನ ಸಮಗ್ರ ಜೀವನವನ್ನು ತೆರೆದುಕೊಳ್ಳುತ್ತದೆ.

ಪ್ರಸ್ತುತ ಅಧ್ಯಯನವು ದಲಿತ ಸಾಹಿತ್ಯ ಪಂಥದಾಚೆ ದಲಿತ ಜೀವನ ಕ್ರಮವನ್ನು ಚಿತ್ರಿಸುವ ಸಾಹಿತ್ಯಿಕ ವಿಚಾರವಂತಿಕೆಯ ವಿಶ್ಲೇಷಣೆಯ ಉದ್ದೇಶ ಹೊಂದಿದೆ. ದಲಿತೇತರ ಲೇಖಕರಿಬ್ಬರ ಕೃತಿಗಳನ್ನು ತೌಲನಿಕ ನೆಲೆಯಲ್ಲಿಟ್ಟು ಅವರ ದಲಿತ ಪರಧೋರಣೆಗಳು, ತಾತ್ವಿಕ ಚಿಂತನೆಗಳು

ದಲಿತೀಯ ಬದುಕನ್ನು ಅವರು ಗ್ರಹಿಸುವ ರೀತಿ, ಸೂಚಿಸುವ ಪರಿಹಾರ, ತಳೆಯುವ ನಿಲುವುಗಳ ಚರ್ಚೆಯನ್ನು ಇಲ್ಲಿ ವಿಸ್ತೃತವಾಗಿ ಕೈಗೆತ್ತಿಕೊಳ್ಳಲಾಗಿದೆ.

"ವ್ಯಕ್ತಿಯೊಬ್ಬನ ಅನುಭವಕ್ಕೂ, ಅವನ ಅಭಿವ್ಯಕ್ತಿಯ ಕ್ರಮಕ್ಕೂ ತುಂಬಾ ಸಂಕೀರ್ಣವಾದ ಸಂಬಂಧವಿದೆ. ಅನನ್ಯ ಅನುಭವವು ಅಭಿವ್ಯಕ್ತಿಯಲ್ಲಿ ಸಾಚಾ ಆಗುತ್ತದೆ. ಒಬ್ಬ ಲೇಖಕ ಬೇರೆಯವರ ಅನುಭವವನ್ನು ಅಭಿವ್ಯಕ್ತಿಸಿದಾಗ ಅದು ಸಾಚಾ ಆಗುವುದಿಲ್ಲ. ಈ ಮಾದರಿಯ ವಾದದ ಅಂತಿಮ ತಿರುಳು ಏನೆಂದರೆ ಲೇಖಕನ ವೈಯುಕ್ತಿಕತೆಯನ್ನು ಸ್ಥಾಪಿಸುವುದು ಮತ್ತು ಬರಹಕ್ಕೂ ವ್ಯಕ್ತಿಯೊಬ್ಬನ ವ್ಯಕ್ತಿತ್ವಕ್ಕೂ ನಿಕಟ ಸಂಬಂಧವನ್ನು ರೂಪಿಸಿಬಿಡುವುದು. ಇದರ ಫಲಿತವೆಂದರೆ ಆಯಾ ಲೇಖಕರು ತಮ್ಮ ಜಾತಿಯ ಕುರಿತು ಬರೆದರೆ ಮಾತ್ರ ಅದರಲ್ಲಿ ಅಥೆಂಟಿಸಿಟಿ ಸಾಧ್ಯ". ಆದರೆ ಈ ಮಾತಿಗೆ ಅಪವಾದವೆಂಬಂತೆ ಕಾರಂತರು ಮತ್ತು ಕುವೆಂಪು ಕಾದಂಬರಿಗಳು ದಲಿತ ಜೀವನ ಚಿತ್ರಣವನ್ನು ನೀಡುವುದರಲ್ಲಿ ಯಶಸ್ವಿಯಾಗಿದೆ.

ಕುವೆಂಪುರವರು ರಚಿಸಿರುವ ಪ್ರಸಿದ್ಧ ಕಾದಂಬರಿಗಳಾದ 'ಮಲೆಗಳಲ್ಲಿ ಮದುಮಗಳು', 'ಕಾನೂನು ಹೆಗ್ಗಡತಿ' ಕಾದಂಬರಿಗಳನ್ನು ಮತ್ತು ಕಾರಂತರು ರಚಿಸಿರುವ 'ಚೋಮನದುಡಿ', ಕುಡಿಯರ ಕೂಸು' ಕಾದಂಬರಿಗಳನ್ನು ನನ್ನ ಅಧ್ಯಯನದ ವ್ಯಾಪ್ತಿಗೆ ಒಳಪಡಿಸಿ ತೌಲನಿಕವಾಗಿ "ಕುವೆಂಪು ಮತ್ತು ಕಾರಂತರ ಕಾದಂಬರಿಗಳಲ್ಲಿ ದಲಿತ ಪ್ರಜ್ಞೆ" ಎಂಬ ಶೀರ್ಷಿಕೆಯಡಿ ವಿಶ್ಲೇಷಿಸುವುದು ಈ ನಿಬಂಧದ ಉದ್ದೇಶವಾಗಿದೆ.

ನಮ್ಮ ಪರಂಪರಾಗತ ಸಾಮಾಜಿಕ ಬದುಕು ದಲಿತರನ್ನು ಊರ ಹೊರಗೆ ಇಟ್ಟು ಅವರ ನೆರಳು ತಮಗೆ ತಾಕದಂತೆ, ತಮ್ಮ ಉಸಿರೂ ಅವರಿಗೆ ಸೋಕದಂತೆ ನಿರ್ಮಿಸಿಕೊಂಡು ಬಂದ ಅಸ್ಪೃಶ್ಯತೆಯಿಂದಾಗಿ ಕಬ್ಬಿಗನಿಗೆ ಅಂತಹದೊಂದು ಬದುಕಿನ ಬಗೆಗೆ ಪೂರ್ಣ ಅನುಭವ ಮತ್ತು ಮುಕ್ತ ಕಲ್ಪನೆಗಳಿಗೆ ಅವಕಾಶವಿದ್ದಿರಲಿಲ್ಲ. ಆದರೆ ಸಮಾನತೆಯ ತತ್ವದ ಮೇಲೆ ರೂಪುಗೊಳ್ಳುತ್ತಿರುವ ಆಧುನಿಕ ಸಮಾಜದಲ್ಲಿ ಜಾತೀಯತೆಯ ಬಗ್ಗೆ ಹುಟ್ಟಿಕೊಳ್ಳುತ್ತಿರುವ ಹೊಸ ವಿಚಾರಧಾರೆಗಳು ಅಸಮಾನತೆಯ ವಿರುದ್ಧ ಹೋರಾಡುತ್ತಿವೆ.

ಸರ್ವೋದಯ, ಸಮನ್ವಯ ಮತ್ತು ಪೂರ್ಣದೃಷ್ಟಿಗಳ ಬಹುಮುಖ್ಯ ಮೌಲ್ಯಗಳನ್ನು ತಮ್ಮ ಸಾಹಿತ್ಯದುದ್ದಕ್ಕೂ ಪ್ರತಿಪಾದಿಸಿಕೊಂಡು ಬಂದಿರುವ ಕುವೆಂಪುರವರ ಆದರ್ಶಗಳು ಶ್ರೀಸಾಮಾನ್ಯನ ಬದುಕಿನ ಉನ್ನತಿಯಲ್ಲಿ ಆರಂಭಗೊಂಡು ವಿಶ್ವಮಾನವ ಪ್ರಜ್ಞೆಯಲ್ಲಿ ಕೇಂದ್ರೀಕೃತವಾಗುತ್ತದೆ.

ಕಾರಂತರ ಕೃತಿಗಳು ಹಾಗೂ ಕುವೆಂಪುರವರ ಕಾದಂಬರಿಗಳಲ್ಲಿ ದೊರಕುವ ವಿವರಗಳ ದಟ್ಟಣೆಯೊಳಗೆ ದಲಿತ ಜೀವನ, ಅವರ ದೈನಂದಿನ ನಡೆಗಳನ್ನು ರೂಪಿಸುವ ಅಂಶಗಳು, ಅವರು ನಂಬಿಕೊಂಡು ಬಂದ ಜೀವನ ತತ್ವಗಳನ್ನು ವಿಚಾರ ಮಾಡುವ ಅಗತ್ಯದಲ್ಲಿ ಸಮಂಜಸತೆ ಇದೆ.

ಒಕ್ಕಲಿಗರ ಆಳಾಗಿ ತಮ್ಮ ಬದುಕನ್ನು ಸವೆಸುವ ದಲಿತರನ್ನು ಯಜಮಾನಿಕೆಯು ನಡೆಸಿಕೊಳ್ಳುವ ರೀತಿ, ಅವರ ದಿವಾನ ಮಾರ್ಗಗಳನ್ನು ತಮ್ಮ ಅನುಕೂಲಕ್ಕೆ ತಕ್ಕ ಹಾಗೆ ಪ್ರತಿಬಿಂಬಿಸುವ ಧೋರಣೆಗಳ ಹಿನ್ನೆಲೆಯನ್ನು ಸಾಮಾಜಿಕ ಪರಿಸರದ ಅಂಶಗಳನ್ನು ಅಗತ್ಯವಾಗಿ ಗುರುತಿಸಬೇಕಾಗುತ್ತದೆ.

ಪ್ರತಿ ಬೀಜಕ್ಕೂ ಮೊಳಕೆಯ ಹಂಬಲಿಕೆ ಇರುವಂತೆ ಹುಟ್ಟಿದ ಪ್ರತಿ ಮನುಷ್ಯನಿಗೂ ಅವನದೇ ಕನಸುಗಳು ತನ್ನ ಪ್ರಜ್ಞೆಗೆ ನಿಲುಕುವ ಬದುಕಿನ ಕಲ್ಪನೆಗಳಿರುತ್ತವೆ. ಲೇಖಕನಾದವನು ಇವರ ತುಳಿತಗೊಂಡ ಮನಸ್ಸಿನ ಎಂತಹ ಭಾಗಗಳನ್ನು ತನ್ನ ಸಂವೇದನೆಯ ಕಣ್ಣಿನಲ್ಲಿ ಬಿಡಿಸುತ್ತಾನೆ ಎಂಬುದು ಗಮನಾರ್ಹ ವಿಚಾರವಾಗುತ್ತದೆ.

ತಾವು ಹುಟ್ಟಿದ ಗ್ರಾಮ್ಯ ಪರಿಸರದೊಂದಿಗಿನ ಅವರ ಸಂಬಂಧಗಳು ಪ್ರಕೃತಿಯ ಮುಗ್ಧತೆಯಲ್ಲಿ ತಮ್ಮನ್ನು ತೊಡಗಿಸಿಕೊಂಡುಬಿಡುವ ಅವರ ತನ್ಮಯತೆ ಮತ್ತು ಪ್ರಾವೀಣ್ಯತೆಗಳ ಅಧ್ಯಯನ ಈ ನಿಬಂಧದ ವ್ಯಾಪ್ತಿಯಲ್ಲಿದೆ.

ಪರಂಪರೆ ಎನ್ನುವುದೊಂದು ವಿಶಾಲ ಆಲದ ಮರದ ಅಗಾಧತೆಯನ್ನು ಆದಿ-ಅಂತ್ಯಗಳಿಲ್ಲದೆ ಪ್ರವಹಿಸುವ ಒಂದು ಸಾಂಸ್ಕೃತಿಕ ಕಾಲ ಪ್ರವಾಹದ ಯಾವುದೋ ದಡದಲ್ಲಿ ನಿಂತು ಈ ನೀರು ಇಲ್ಲಷ್ಟೇ ಆವಿರ್ಭವಿಸಿದೆ, ಅದಕ್ಕೆ ಇಂದಿನ ಸೋಂಕಿಲ್ಲ, ನಾಳಿಯ ಎಗ್ಗಿಲ್ಲ ಎನ್ನಲಾಗುವುದಿಲ್ಲ. ಕನ್ನಡ ಸಾಹಿತ್ಯ ಪರಂಪರೆಯಲ್ಲಿ ದಲಿತ ಸಾಹಿತ್ಯದ ಸ್ಥಾನವು ವಿಶಿಷ್ಟತೆಯನ್ನು ಪಡೆದುಕೊಂಡಿದೆ.

## ಅಧ್ಯಾಯ -೨

## ಕನ್ನಡದಲ್ಲಿ ದಲಿತ ಪ್ರಜ್ಞೆ – ಒಂದು ಚಾರಿತ್ರಿಕ ನೋಟ

ಒಂದು ನಿರ್ದಿಷ್ಟ ಸಾಹಿತ್ಯ ಪರಂಪರೆಯು ತನ್ನ ಸಾಧ್ಯತೆಗಳನ್ನು ತೀರಿಸಿಕೊಂಡು ಜಡವಾಗಿ ಹೋಗುವ ಹೊತ್ತಿಗೆ ಇನ್ನೊಂದು ಸಾಹಿತ್ಯ ಪರಂಪರೆಯ ಉಗಮಕ್ಕೆ ಕಾರಣವಾದ ಅಂಶಗಳನ್ನು ತನ್ನ ಒಡಲಿನಲ್ಲಿ ಧರಿಸಿಕೊಂಡಿರುತ್ತದೆ. ಪ್ರಮುಖವಾದ ಹೊಸ ಸಾಹಿತ್ಯ ಮಾರ್ಗದ ಉಗಮಕ್ಕೆ ಕಾರಣವಾಗುತ್ತವೆ. ಈ ಮಾತುಗಳು ಸಾಹಿತ್ಯದ ಅನನ್ಯತೆಯನ್ನು ಪ್ರಶ್ನಿಸುವುದಿಲ್ಲ. ಬದಲಾಗಿ ಸಾಹಿತ್ಯದ ಅನನ್ಯತೆಗೆ ಕಾರಣವಾದ ಸೃಜನಶೀಲತೆಯ ನೆಲೆಗಳನ್ನು ಅರ್ಥವಿಸುವುದಕ್ಕೆ ಸುಭದ್ರವಾದ ಒಂದು ನೆಲೆಗಟ್ಟನ್ನು ಒದಗಿಸಿಕೊಡುತ್ತವೆ. ಶಾಂತಿನಾಥ ದೇಸಾಯಿಯವರು ಸರಿಯಾಗಿ ಗುರುತಿಸಿದಂತೆ "ಸೃಜನಾತ್ಮಕ ಪ್ರಭಾವದ ಸಂದರ್ಭದಲ್ಲಿ ಲೇಖಕನ ಪ್ರತಿಭೆ ತನ್ನ ಸ್ವಂತಿಕೆಯನ್ನು ಕಳೆದುಕೊಳ್ಳುವುದಿಲ್ಲ. ತದ್ವಿರುದ್ಧವಾಗಿ ಹೊರಗಿನ ಪ್ರಭಾವದಿಂದ ಲೇಖಕ ತನ್ನತನವನ್ನು ಶೋಧಿಸುತ್ತಾನೆ, ರೂಪಿಸುತ್ತಾನೆ". ಒಂದು ಅತ್ಯುತ್ತಮ ಸಾಹಿತ್ಯ ಪ್ರಕಾರವಾಗಲಿ ಸಾಹಿತ್ಯ ಕೃತಿಯಾಗಲೀ ಸಾಹಿತ್ಯಿಕ ಮತ್ತು ಸಾಹಿತ್ಯೇತರ ಅಂಶಗಳಿಂದ ಯಾಂತ್ರಿಕವಾಗಿ ಪ್ರಭಾವಿತವಾಗುವುದು ಇಲ್ಲ. ಬದಲಾಗಿ ತನ್ನ ಕಾಲದ ವಿಶಿಷ್ಟ ಅವಶ್ಯಕತೆಗಳಿಗೆ ಅನುಗುಣವಾಗಿ ತನಗೆಷ್ಟು ಬೇಕೋ ಅಷ್ಟನ್ನು ಪರಿಸರದಿಂದ ಪಡೆದೇ ತೀರುತ್ತದೆ. ಈ ಅರ್ಥದಲ್ಲಿ ಸಾಹಿತ್ಯದ ಆಂತರಿಕ ಅರ್ಥವಲಯಕ್ಕೂ ಸಾಮಾಜಿಕ ಬಹಿರ್‌ಪ್ರಪಂಚಕ್ಕೂ ಒಂದು ವಿಧದ ಸಂಬಂಧ ಏರ್ಪಟ್ಟಿರುತ್ತದೆ. ನರೇಂದ್ರ ಮೋಹನರು ಸರಿಯಾಗಿ ಗುರುತಿಸುವಂತೆ. "ಕಲೆ ಮತ್ತು ಪ್ರತಿಭಟನೆಯು ಸಾಂಸ್ಕೃತಿಕ ಆಶೋತ್ತರಗಳೊಡನೆ ಅಥವಾ ಸಾಂಸ್ಕೃತಿಕ ಕ್ರಾಂತಿಯೊಡನೆ ಸೂಕ್ಷ್ಮ ಸಂಬಂಧ ಹೊಂದಿದೆ ಸಾಂಸ್ಕೃತಿಕ ಕ್ರಾಂತಿಯು ರಾಜಕೀಯ ಪ್ರಜ್ಞೆಯ ಫಲವಾಗಿರುವಂತೆ ಸಮಾಜದ ಆಶೋತ್ತರಗಳ ಪ್ರತಿಬಿಂಬವೂ ಹೌದು." ಹೀಗೆ ಸಾಹಿತ್ಯ ಪರಂಪರೆಯ ಉಗಮದಲ್ಲಿ ನವೋದಯ, ಪ್ರಗತಿಶೀಲ, ನವ್ಯ, ದಲಿತ & ಬಂಡಾಯ ಸಾಹಿತ್ಯದ ಪ್ರಕಾರಗಳು (ಪಂಥಗಳು) ಉದಯವಾದವು.

ದಲಿತ ಪ್ರಜ್ಞೆ ಎಂದರೇನು? ಎಂಬುವುದಕ್ಕೆ ಯಾವುದೇ ನಾಲ್ಕು ಸಾಲುಗಳ ಮಧ್ಯದಲ್ಲಿ ಇದರ ಪ್ರಮೇಯವನ್ನು ಹೇಳುವುದು ಕಷ್ಟ ಸಾದ್ಯ. ಯಾವುದೇ ರೀತಿಯಲ್ಲಿ ವ್ಯಾಖ್ಯಾನವನ್ನು ಕೊಟ್ಟರೂ ಅದಕ್ಕೆ ವಿವರಣೆಯೂ ಅಷ್ಟೆ ಅವಶ್ಯವಾದುದು ಎನಿಸುತ್ತದೆ. 'ಪ್ರಜ್ಞೆ' ಎಂಬ ಪದ ಭೂತ ವರ್ತಮಾನ ಭವಿಷ್ಯತ್ಕಾಲಗಳನ್ನು ಒಳಗೊಂಡು ಅವುಗಳನ್ನು ಒಂದು ಸರಣಿಯಲ್ಲಿರಿಸಿ ಪರಿಸ್ಥಿತಿಯನ್ನು ಗ್ರಹಿಸಿ ಮುಂದಿನ ಸ್ಥಿತಿಗೆ ಚಾಲನೆ ನಿಡುವ ಒಂದು ಶಕ್ತಿ ಎಂದು ತೆಗೆದುಕೊಂಡರೆ, ದಲಿತ ಬದುಕಿಗೆ ಸಂಬಂಧಿಸಿದ ಈ ದಲಿತ ಪ್ರಜ್ಞೆಯನ್ನು ಇದೇ ವ್ಯಾಪ್ತಿಯಲ್ಲಿ ಪರಿಶೀಲಿಸಲೇಬೇಕಾಗುತ್ತದೆ. ಅಂದರೆ ದಲಿತ ವಿರೋಧಿ ಅಸ್ತಿತ್ವದ ವಿಚಾರಗಳನ್ನು ಭೂತ ವರ್ತಮಾನ ಭವಿಷ್ಯತ್ಕಾಲಗಳನ್ನು ಒಳಗೊಂಡಂತೆ

ಸಾಮಾಜಿಕ, ಆರ್ಥಿಕ, ರಾಜಕೀಯ, ಬೌದ್ಧಿಕ, ಆಧ್ಯಾತ್ಮಿಕ, ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಹೀಗೆ ಎಲ್ಲಾ ರಂಗದಲ್ಲಿ ದಲಿತರ ಮೇಲೆ ಹೇರಿರುವ ಮತ್ತು ಶೋಷಿಸುವ ಅಂತರಾಳದ ಬಗೆಗೆ ಮೂಡುವ ಅರಿವು ಮತ್ತು ಆ ವಸ್ತು ಸ್ಥಿತಿಯಿಂದ ವಿಮೋಚನೆ ಹೊಂದಲು ಮಾಡುತ್ತಿರುವ ಪ್ರಯತ್ನ ಹಾಗೂ ಕ್ರಿಯಾತ್ಮಕವಾಗಿ ಬೆಳವಣಿಗೆ ಹೊಂದುತ್ತವೆ ಎಂಬುವುದರಲ್ಲಿ ನಂಬಿಕೆ ಇದ್ದು ಹೊಸ ಚರ್ಚೆಗೆ ಬೆಳೆವಣಿಗೆಗೆ ಸಾಗುತ್ತವೆ ಎಂಬ ಆಶಯ ಹೊಂದಿರುವಂತದ್ದು 'ದಲಿತ ಪ್ರಜ್ಞೆ' ಎಂದು ಕರೆಯಿಸಿಕೊಳ್ಳುತ್ತದೆ.

'ದಲಿತ' ಎಂದರೆ ಹಿಂಸೆಗೆ ಒಳಗಾದವನು ಎಂದು ಅರ್ಥ, ದೈಹಿಕ ಮಾನಸಿಕ ಹೊಡೆತಕ್ಕೆ ಗುರಿಯಾದ ಆರ್ಥಿಕ ಸಾಮಾಜಿಕ ಶೋಷಣೆಗೆ ಬಲಿಯಾದ, ಸಾಂಸ್ಕೃತಿಕವಾಗಿ ದಿವಾಳಿಯಾದ ಜನರೇ 'ದಲಿತರು' ದಲಿತರೆಂದರೆ ಕೇವಲ ಪರಿಶಿಷ್ಟ ಜಾತಿ ಬುಡಕಟ್ಟುಗಳಲ್ಲ ವ್ಯವಸ್ಥೆಯ ಪೀಡನೆಯನ್ನು ತಾಳಲಾರದೆ ಕಣ್ಣೀರಿಗೆ ಬದಲು ರಕ್ತ ಸರಿಯಾದ ದುರ್ಬಲವರ್ಗವೇ ದಲಿತರು.

ಶತಮಾನಗಳಿಂದ ಜನ ಸಮುದಾಯದಲ್ಲಿ ಆರ್ಥಿಕ, ಸಾಮಾಜಿಕ, ರಾಜಕೀಯವಾಗಿ ಶೋಷಣೆಗೆ ಒಳಗಾದವರು ಒಟ್ಟು ಸಮಾಜದೊಂದಿಗೆ ಬದುಕಲಾಗದೆ ಊರ ಹೊರಗೆ ವಾಸಿಸಿ ಕೀಳು ವೃತ್ತಿಗೆ ಅವಲಂಬಿತರಾಗಿ ತಮ್ಮ ಹೆಸರು ಹೇಳಿಕೊಳ್ಳಲು ನಾಚಿಕೆ ಪಡುವ ಅಸ್ಪೃಶ್ಯರು ಅಥವಾ ಬಹಿಷ್ಕೃತರೆನಿಸಿಕೊಂಡವರೆಲ್ಲರೂ ದಲಿತರೆನಿಸಿಕೊಳ್ಳುತ್ತಾರೆ (ದಲಿತ ಸಾಹಿತ್ಯ ಚಳುವಳಿಯ ತಾತ್ವಿಕ ಚಿಂತನ) ದಲಿತ ಪದವನ್ನು ಹೊಲೆಯ ಮಾದಿಗ ಎಂಬ ಸಂಕುಚಿತಾರ್ಥದಲ್ಲಿ ಉಪಯೋಗಿಸಲು ಆಗುವುದಿಲ್ಲ. ಏಕೆಂದರೆ ಹರಿಜನ-ಗಿರಿಜನರಲ್ಲಿ ಬಹುಮಂದಿ ಆರ್ಥಿಕವಾಗಿ ಭದ್ರವಾಗಿದ್ದಾರೆ. ವಿದ್ಯಾವಂತರಾಗಿ ದೊಡ್ಡ ಹುದ್ದೆಗಳನ್ನು ಪಡೆದಿದ್ದಾರೆ. ರಾಜಕೀಯ ಕ್ಷೇತ್ರದಲ್ಲಿ ಪ್ರತಿಷ್ಟತರಾಗಿದ್ದಾರೆ. ಕೇಂದ್ರ ಮತ್ತು ರಾಜ್ಯ ಸರ್ಕಾರಗಳಲ್ಲಿ ಸಚಿವರಾಗಿ ಗಣ್ಯರಾಗಿದ್ದಾರೆ ಆದ್ದರಿಂದ ಪಂಚಮರೆಲ್ಲ ದಲಿತರೆಂದು ಹೇಳುವುದು ಅರ್ಥಹೀನವಾಗುತ್ತದೆ ಎಲ್ಲಾ ಜಾತಿಗಳಲ್ಲಿಯೂ ಕಂಡುಬರುವ ಕಡುಬಡವರೆ ದಲಿತರು. ತುಳಿತಕ್ಕೆ ಒಳಗಾಗಿ ಸುಲಿಗೆಗೆ ಆಹಾರವಾದ ದಬ್ಬಾಳಿಕೆಗೆ ಪಾದರಕ್ಷೆಯಾದ ದರಿದ್ರ ಜನರನ್ನು ದಲಿತರೆಂದು ಕರೆಯುವುದು ಅತ್ಯಂತ ಸಮಂಜಸ ಅಲ್ಲದಿದ್ದರೆ ವಿಶಾಲ ತಾತ್ವಿಕ ದೃಷ್ಟಿ ಲಭ್ಯವಾಗುವುದಿಲ್ಲ.

'ದಲಿತ' ಎಂಬ ಪದಕ್ಕೆ 'ಹಿಂಸೆಗೆ ಒಳಗಾದ', 'ತುಳಿತಕ್ಕೆ ಒಳಗಾದ' ಎಂಬ ಅರ್ಥಗಳ ಜೊತೆಗೆ 'ಸೋಲಿಸಲಾಗದ' ಎಂಬ ಅರ್ಥವು ಇದೆ. ಒಟ್ಟಾರೆಯಾಗಿ ದೇವಯ್ಯ ಹರವೆಯವರು ಹೇಳಿರುವಂತೆ "ನಮ್ಮ ಸಮಾಜದಲ್ಲಿ ಹಿಂಸೆಗೆ ಒಳಗಾದ ಹಾಗೂ ಸೋಲಿಸಲಾಗದ ಅಸ್ಪೃಶ್ಯರೆನಿಸಿಕೊಂಡ ಜನವರ್ಗವೇ ದಲಿತರು ಮುಂದುವರಿದ ಅವರು 'ದಲಿತ'ದ ವ್ಯಾಖ್ಯೆಯನ್ನು ಹೀಗೆ ಮಂಡಿಸಿದ್ದಾರೆ

ಆರ್ಥಿಕವಾಗಿ, ಸಾಮಾಜಿಕ, ಶೈಕ್ಷಣಿಕವಾಗಿ, ರಾಜಕೀಯವಾಗಿ ಯಾರನ್ನು ಕಡೆಗಣಿಸಲಾಗಿದೆಯೋ ಅಂಥವರು ಮಾತ್ರ ದಲಿತರು.

ಡಾ॥ ಅರವಿಂದ ಮಾಲಗಿತ್ತಿಯವರು ದಲಿತರನ್ನು ಹೀಗೆ ವಿವರಿಸಿದ್ದಾರೆ. "ಶತಮಾನಗಳಿಂದ ಜನಸಮುದಾಯದಲ್ಲಿ ಆರ್ಥಿಕ ಸಾಮಾಜಿಕ ರಾಜಕೀಯವಾಗಿ ಶೋಷಣೆಗೆ ಒಳಗಾದವರು ಒಟ್ಟು ಮನುಷ್ಯ ಸಮಾಜದೊಂದಿಗೆ ಬದುಕಲಾಗದೆ. ಊರ ಹೊರಗೆ ವಾಸಿಸಿ ಕೀಳು ವೃತ್ತಿಗೆ ಅವಲಂಭಿರಾಗಿ ಹೆಸರು ಹೇಳಿಕೊಳ್ಳಲು ನಾಚಿಕೆ ಪಡುವ ಅಶ್ಪೃಶ್ಯರು ಅಥವಾ ಬಹಿಷ್ಕೃತರೆನಿಸಿಕೊಂಡವರೆಲ್ಲರೂ ದಲಿತರು.

ಅಂಬೇಡ್ಕರ್ ತಮ್ಮ ಬರಹಗಳಲ್ಲಿ 'ಡಿಪ್ರೆಸ್ಡ್' ಅಂದರೆ ದಲಿತ ಎಂಬ ನುಡಿಯನ್ನೆ ಬಳಸಿದ್ದಾರೆ. ದೇವಯ್ಯ ಹರವೆ ಅವರು ಈ ಬಗ್ಗೆ ಹೀಗೆ ನುಡಿದಿದ್ದಾರೆ. "ದಲಿತ ಎಂದರೆ ಅಸ್ಪೃಶ್ಯ ಹಾಗೂ ಪ್ರಮಾಣದಲ್ಲಿ ಅಸ್ಪೃಶ್ಯತೆಯ ಅನುಭವವಿಲ್ಲದಿದ್ದರೂ ಅತ್ಯಂತ ವೇದನೆಗೆ ಒಳಗಾದ, ಚದುರಿ ಹೋಗಿರುವ ಜನಾಂಗದ ಪ್ರತಿನಿಧಿಗಳು, ಪ್ರಗತಿಪರ ದಲಿತ ಸಂಘಟನೆಯೊಂದಿಗೆ ತಮ್ಮನ್ನು ತಾವು ಗುರುತಿಸಿಕೊಂಡು ತಮ್ಮ ಸಾಹಿತ್ಯ ಮತ್ತು ಸಂಘಟನೆಗಳ ಮೂಲಕ ಅಸ್ಪೃಶ್ಯತೆಯನ್ನು ಅಸಮಾನತೆಯನ್ನು ತೊಡೆದು ಹಾಕಲು ಪ್ರಯತ್ನಪಡುವಂತಹವರೂ ಆಗಿರುತ್ತಾರೆ. ಅಂದರೆ ತಲೆತಲೆಮಾರಿನಿಂದ ಆರ್ಥಿಕವಾಗಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ ಮತ್ತು ರಾಜಕೀಯವಾಗಿ ಹಿಂದೂಳಿದ ಜನಾಂಗದವರು ಮಾತ್ರ ದಲಿತರು ಎಂದು ಸ್ಪಷ್ಟವಾಗಿ ಹೇಳಬೇಕು ಇವರು ತಮ್ಮ ನೋವನ್ನು ಅತ್ಯಂತ ಸಮರ್ಥವಾಗಿ ಭಾಷೆಯ ಮುಖಾಂತರ ಸೃಷ್ಟಿಸುವಂತಹದ್ದು 'ದಲಿತ ಸಾಹಿತ್ಯ'.

ಇದನ್ನು ಕುರಿತು ರಹಮತ್ ತರೀಕೆರೆಯವರ ವ್ಯಾಖ್ಯೆ ಹೀಗಿದೆ "ದಲಿತರ ಬಗ್ಗೆ ಇತರರು ಬರೆದುದು, ಅಥವಾ ದಲಿತರೇ ಸಾರ್ವಜನಿಕ ವಿಷಯಗಳ ಬಗ್ಗೆ ಬರೆದುದು ದಲಿತ ಸಾಹಿತ್ಯವಲ್ಲ ದಲಿತರಾದವರು ತಮ್ಮ ರಕ್ತಮಾಂಸಗಳ ಜೀವಂತ ಅನುಭವ ಅನಿಸಿಕೆಯನ್ನು ಹಿಡಿದಿಟ್ಟಿರುವುದು ಮಾತ್ರ ದಲಿತ ಸಾಹಿತ್ಯ.

ದಲಿತ ಸಾಹಿತ್ಯವನ್ನು ಕುರಿತು ದೇವನೂರು ಮಹಾದೇವ ಹೇಳುವ ಮಾತುಗಳು ತುಂಬ ವಿಶಿಷ್ಟವಾಗಿವೆ. "ನಾನು ಅಂತ ಕತ್ತಲ ರಾಜ್ಯದಿಂದ ಬಂದಂಥವನು ಕಲಾಮಾದ್ಯಮದಲ್ಲಿ ನಾನು ಕಂಡುಕೊಳ್ಳುತ್ತಿರುವುದು ಒಂದು ಆಕಸ್ಮಿಕವೇ, ನಾನು ಇದುವರೆಗೆ ಬರೆದಿರುವುದು ನಮ್ಮ ರಾಜ್ಯದ ಮನುಷ್ಯನ ಆರೇಳು ಬೆರಳುಗಳು, ಹೆಚ್ಚೆಂದರೆ ಒಂದು ಹಸ್ತ ಇದ್ದೀತು ಅದಷ್ಟೆ ಕನ್ನಡ ಸಾಹಿತ್ಯದ ಗತಿಯನ್ನು ಅಲ್ಲಾಡಿಸುವಷ್ಟು ತನ್ನ ಪ್ರಮಾಣಕ್ಕಿಂತ ಹೆಚ್ಚಾಗಿ ಅಲ್ಲಾಡಿಸಿದೆ ಒಂದರೆಡು ಬೆರಳು ಹಸ್ತಕ್ಕೆ

ಇಷ್ಟವಾಗುವುದಾದರೆ ಕತ್ತಲರಾಜ್ಯದ ಇಡೀ ಮನುಷ್ಯ ಮಾತನಾಡುವುದಾದರೆ ಅದರಿಂದ ಉಂಟಾಗುವ ಬದಲಾವಣೆಯು ತನ್ನ ಕಲ್ಪನೆಗೆ ಎಟುಕದಷ್ಟಾಗಬಹುದು. ಆ ಬದಲಾವಣೆಗೆ ಈ ಮನುಷ್ಯನ ನುಡಿಗೆ ನುಡಿ-ಕೊಡಲು ನೂರಾರು ಜನರು ಹುಟ್ಟಬೇಕಾದೀತು. ಒಂದು ಆಂದೋಲನ ಇದನ್ನು ಕಾಣಿಸಬಹುದೇನೋ".

ಬರಗೂರು ರಾಮಚಂದ್ರಪ್ಪನವರು ದಲಿತ ಸಾಹಿತ್ಯವನ್ನು ಹೀಗೆ ವಿವರಿಸಿದ್ದಾರೆ. "ಸಾಹಿತ್ಯದ ಮಟ್ಟಿಗೆ ಕೃತಿಯೊಂದರ ಅನುಭವ ಪ್ರಾಮಾಣ್ಯದ ಆಧಾರದಿಂದ ಹುಟ್ಟಿನಿಂದ ದಲಿತರಾದವರು ಸೃಷ್ಟಿಸಿದ ಪ್ರಗತಿಪರ ಸಾಹಿತ್ಯವನ್ನು ದಲಿತ ಸಾಹಿತ್ಯವೆಂದು ಪರಿಗಣಿಸಬಹುದು".

ದಲಿತ ಪದ ಮತ್ತು ಸಾಹಿತ್ಯವನ್ನು ಕುರಿತು ಡಾ॥ ದುರ್ಗಾದಾಸ್ ಅವರು "ಸಾಹಿತ್ಯರಚನಗೆ ಜಾತಿ ಒಂದು ಮಾನದಂಡವಾಗಬೇಕಿಲ್ಲವೆಂದು ಹೇಳಿದ್ದಾರೆ. ದಲಿತ ಸಾಹಿತ್ಯ ಮತ್ತು ಚಳುವಳಿಯ ಬಗ್ಗೆ ಬರೆಯತ್ತಾ ನಟರಾಜ್ ಹುಳಿಯಾರ್ "ಚಳುವಳಿಯಿಂದ ಸಾಹಿತ್ಯ ಹುಟ್ಟುತ್ತದೆ" ಹಾಗೂ "ಚಳುವಳಿಯಿಂದ ಸಾಹಿತ್ಯ ಹುಟ್ಟುವುದಿಲ್ಲ" ಎಂಬ ಎರಡು ನೆಲೆಗಳಲ್ಲಿ ಈ ಸಮಸ್ಯೆಯನ್ನು ಚರ್ಚಿಸಿದ್ದಾರೆ. "ಚಳುವಳಿಯ ಗುರಿಯೂ ಮತ್ತು ಸಾಹಿತ್ಯದ ಗುರಿಯೂ ಒಂದೇ ಆದಾಗ ಹುಟ್ಟುವ ಸೌಂದರ್ಯಾತ್ಮಕ ಸಮಸ್ಯೆ ಎಂಥದ್ದು ಎಂಬುದನ್ನು ವಿಮರ್ಶಕ ವಿಚಾರದಿಂದ ನೋಡಬೇಕಾಗುತ್ತದೆ. ಚಳುವಳಿಗಳನ್ನು ಕಚ್ಚಾ ವಸ್ತುವಾಗಿ ಸ್ವೀಕರಿಸಿ ಸಾಹಿತ್ಯ ರಚನೆ ಮಾಡಿದ ನಿದರ್ಶನಗಳನ್ನು ಇವೆ. ಚಳುವಳಿಗಳಿಂದ ಪ್ರಭಾವಿತರಾಗಿ ಬರೆಯುವಾಗಲೂ ಎರಡು ನೆಲೆಗಳಿವೆ.

1. ಚಳುವಳಿಯಲ್ಲಿ ನೇರವಾಗಿ ಭಾಗಿಯಾಗಿ ಸಾಹಿತ್ಯ ಸೃಷ್ಟಿಸುವುದು.

2. ಚಳುವಳಿಗಳ ಹೊರಗೆ ನಿಂತು ಸಾಹಿತ್ಯ ಸೃಷ್ಟಿಸುವುದು.

ಈ ಎರಡು ಸಂದರ್ಭಗಳಲ್ಲಿ ಕಲ್ಪನಾ ವಿಲಾಸ ಕೆಲಸ ಮಾಡುವ ಕ್ರಮ ಬೇರೆ ಬೇರೆ" ಎಂದು ಅವರು ಅಭಿಪ್ರಾಯ ಪಡುತ್ತಾರೆ. "ರಾಮಾಯಣ" ಮತ್ತು "ಮಹಾಭಾರತ" ವಿಶ್ವ ಸಾಹಿತ್ಯದ ಮೊಟ್ಟ ಮೊದಲ ದಲಿತ ಮಹಾಕಾವ್ಯಗಳು. ಭಾರತೀಯ ಜನಜೀವನದ ಎಲ್ಲಾ ವರ್ಗಗಳ ಸರ್ವಸ್ತರದ ಸಂವೇದನೆಗಳನ್ನು ಅವು ಹಿಡಿದಿರುವ ರೀತಿ ಅಪೂರ್ವವಾಗಿದೆ. ರಾಮಲಕ್ಷ್ಮಣ ಸೀತೆ ಮತ್ತು ಪಾಂಡವರು ಹುಟ್ಟಿನಿಂದ ದಲಿತಾದರೂ ಅನಿವಾರ್ಯ ಇಕ್ಕಟ್ಟಿನಿಂದ ದಟ್ಟ ದಲಿತರಾಗುತ್ತಾರೆ ತಮಗೆ ಧರ್ಮವಾಗಿ ದಕ್ಕ ಬೇಕಾಗಿದ್ದ ಸಕಲ ಸವಲತ್ತುಗಳನ್ನು ಕಳೆದುಕೊಂಡು ಅಬ್ಬೇಪಾರಿಗಳಂತೆ ನಿರ್ಗತಿಕ ಕಾಡು ಮೇಡುಗಳಲ್ಲಿ ಅಲೆದಾಡುತ್ತಾರೆ.

ಮುಂದೆ ಉಭಯಕವಿ ಕಮಲರವಿ ರಾಘವಾಂಕನ 'ಹರಿಶ್ಚಂದ್ರ ಕಾವ್ಯ' ಜ್ವಲಂತ ಸಮಸ್ಯೆಯನ್ನು ತನ್ನ ಒಡಲಲ್ಲಿ ತುಂಬಿಕೊಂಡು ಉತ್ತಮ ಕಲಾಕೃತಿಯಾಗಿ ಮೂಡಿಬಂದಿದೆ. ನೀವು ಹೊಲತಿಯಾದುದರಿಂದ ನಿಮ್ಮನ್ನು ಮದುವೆಯಾಗುವುದಿಲ್ಲ ಎಂಬ ರಾಜನ ಮಾತು ದಲಿತ ಬರಹಗಾರರ ತೀವ್ರ ಆಕ್ಷೇಪಕ್ಕೆ ಗುರಿಯಾಗಿದೆ.

ವಾಲ್ಮೀಕಿ, ವ್ಯಾಸ, ರಾಘವಾಂಕ ಮುಂತಾದ ಕವಿಗಳ ಸುಪ್ರಸಿದ್ದ ಪಾತ್ರಗಳು ಆತ್ಮಶ್ರದ್ದೆಯನ್ನು ನೀಗಿಕೊಳ್ಳದೆ ತತ್ವನಿಷ್ಠರಾಗಿ ಹೋರಾಡುತ್ತಾರೆ. ಅವರ ಅಂತಃಸತ್ವ ಅವರನು ರಕ್ಷಿಸುತ್ತದೆ. ಉದ್ಧರಿಸುತ್ತದೆ ಇವರೆಲ್ಲರೂ ತಮ್ಮ ಕಾವ್ಯಗಳನ್ನು ಬರೆದು ಕಲಾತ್ಮಕಗೊಳಿಸಿ ಸುಂದರ ಹಾಗೂ ಸಾರ್ವಕಾಲಿಕವಾದಂತ ಕಲಾಕೃತಿಗಳನ್ನು ನೀಡುರುವುದನ್ನು ಕಾಣಬಹುದು.

ದಲಿತ ಲೇಖಕರೆಲ್ಲ ತಮ್ಮ ಸಾಹಿತ್ಯ ಕೃಷಿಯನ್ನು ಕಾವ್ಯದಿಂದಲೇ ಆರಂಭಿಸಿದರು. ಅನಂತರದಲ್ಲಿ ಕಥೆ ಕಾದಂಬರಿಗಳ ಕ್ಷೇತ್ರಕ್ಕೆ ವ್ಯಾಪಿಸಿರುವುದು ಕಂಡುಬರುತ್ತದೆ. ಇನ್ನು ಕೆಲವರು ಕಾವ್ಯದಲ್ಲಿಯೇ ನೆಲೆನಿಂತಿರುವುದನ್ನು ಕಾಣುತ್ತೇವೆ. ಕಾವ್ಯ ಹುಲುಸಾಗಿ ಬೆಳೆದಷ್ಟು ಇತರ ಪ್ರಕಾರ ಬೆಳೆಯಲಿಲ್ಲವಾದರೂ ಬಂದ ಕೆಲವೇ ಬೆರಳಣಿಕೆಯ ಕೃತಿಗಳು ಸತ್ವವನ್ನು ಮೀರಿ ನಿಂತವು. ಹೊಸಗನ್ನಡ ಸಾಹಿತ್ಯದ ಕೃತಿಗಳ ಕುರಿತು ಮರುಚಿಂತನೆ ಮಾಡುವಂತೆ ಒತ್ತಾಸೆ ತಂದವು ಒಟ್ಟು ದಲಿತ ಕಥಾನಕಗಳಲ್ಲಿ ಕಾದಂಬರಿಗಳೇ ಹೆಚ್ಚು ಚರ್ಚೆಗೆ ಒಳಗಾದವು. ದಲಿತರ ಬದುಕಿನ ಭಿನ್ನ ಮಜಲುಗಳನ್ನು ಕಾದಂಬರಿ ಬಿಚ್ಚಿಡುತ್ತದೆ. ಕದನದ ಬದುಕಿನಲ್ಲಿಯೇ ಇರುವ ಜೀವಸೆಲೆ, ಜೀವಂತಿಕೆ, ಸಹಬಾಳ್ವೆಯನ್ನು ಗುರುತಿಸುವುದು ಗಮನಾರ್ಹ.

ಕನ್ನಡ ಸಾಹಿತ್ಯದಲ್ಲಿಯೂ ಕೂಡ ದಲಿತ ಪ್ರಜ್ಞೆ ಕಾವ್ಯ, ಕಾದಂಬರಿ, ಸಣ್ಣಕತೆ, ನಾಟಕ, ಜನಪದ ಪ್ರಕಾರಗಳಲ್ಲಿ ಕಂಡುಬಂದಿತು, ಆದರೆ ಅತಿ ಹೆಚ್ಚು ಚರ್ಚೆಗೆ ಒಳಗಾದ ಪ್ರಕಾರವೆಂದರೆ ಕಾದಂಬರಿ. ದಲಿತ ಸಾಹಿತ್ಯ ಉಗಮವನ್ನು ಸಾರಿದ್ದು ಸಣ್ಣಕಥೆಗಳೇ ಆದರೂ ಸಾಹಿತ್ಯದ ಅನೇಕ ಪ್ರಕಾರಗಳಲ್ಲಿ ತುಂಬ ಜನಪ್ರಿಯವಾಗಿದ್ದು ಕಾವ್ಯವೇ. ಕಳೆದ ಕಾಲು ಶತಮಾನದ ಕಾಲಘಟ್ಟದ ಕನ್ನಡ ಸಾಹಿತ್ಯದ ಸ್ವಪ್ನಾತ್ಮಕ ಹರಿವು, ತಾನು ಹಿಂದೆ ಕಾಣದಿದ್ದ ಒಂದು ಜೀವವಾಹಿನಿ ಕನ್ನಡ ಸಾಹಿತ್ಯದ ಮುಖ್ಯ ವಾಹಿನಿಯನ್ನು ಕಂಡುಕೊಳ್ಳಲು ಸಂಭ್ರಮದಿಂದ ಸಡಗರಿಸಿ ಸಾಕಷ್ಟು ಸದ್ದುಗದ್ದಲ ಸಹಿತವಾಗಿಯೂ ಅದು ಮುಂದಾದಾಗ ಸಹಜವಾಗಿಯೇ ಮುಖ್ಯವಾಹಿನಿಯು ಹಿಂದರಿಯದ ಕೊಂಚ ಗಲಿಬಿಲಿಗೂ ಮುಂಬರುವುದರ ಬಗೆಗಿನ ಕಾತರಕ್ಕೂ ಪಕ್ಕಾಗಿರುವುದು ಅದೇ ಕಳೆದ ಕಾಲು ಶತಮಾನದ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಸರಿಯಾಗಿಯು ದಾಖಲಾಗಿರುವಂತಿದೆ. ದಲಿತ ಸಾಹಿತ್ಯದ ಹರಿವು ಕನ್ನಡದ ಒಟ್ಟು ಜನಸಂಸ್ಕೃತಿಯ ವಾಹಿನಿಯನ್ನು ಕೂಡಿಕೊಳ್ಳಲೂ ಮುಂದಾದಾಗ ಉಂಟಾದ

ದಲಿತೇತರರ ಪ್ರತಿಕ್ರಿಯೆ ಒಂದೆಡೆ, ಸಹಾನುಭೂತಿ ಮೂಲದಿಂದ ಹೊರಟರೆ, ಇನ್ನೊಂದೆಡೆ ಬಹುಶಃ ಸೌಂದರ್ಯೋಪಾಸನೆಯ ಮೂಲಕ ಒಂದು ರೀತಿಯ ಅಸಹನೀಯ ಎನಿಸಿರಬಹುದಾದ ಅಥವಾ ರಸಭಂಗಾನುಭವದ ಮೂಲದಿಂದಲೂ ಈ ಪ್ರತಿಕ್ರಿಯೆ ಹೊರಟ್ಟಿದ್ದು ಆಶ್ಚರ್ಯವೇನು ಅಲ್ಲ. ದಲಿತ ಸಾಹಿತ್ಯದ ನೆಲೆಯಲ್ಲಿ ಹತ್ತು ಶತಮಾನಗಳ ಸಮಗ್ರ ಕನ್ನಡ ಸಾಹಿತ್ಯದ ಅವಲೋಕನದಿಂದ ಒಂದು ಮೂಲಭೂತ ಸತ್ಯದ ಅರಿವಾಗುವಂತೆ ತೋರುತ್ತದೆ. ಅದೆಂದರೆ ನವೋದಯ ಪೂರ್ವದ ಪ್ರಾಚೀನ ಕನ್ನಡ ಸಾಹಿತ್ಯದ ಸೃಷ್ಟಿಕ್ರಿಯೆಯ ಹಿಂದೆ, ಒಂದು ಶಕ್ತಿ, ಒಂದು ಚಿರಂತನ ಪ್ರಚೋದನೆಯಾಗಿ ಕೆಲಸ ಮಾಡಿರುವುದನ್ನು ಡಾ॥ ಜಿ.ಎಸ್. ಶಿವರುದ್ರಪ್ಪ, ಕೀರ್ತಿನಾಥ ಕುರ್ತುಕೋಟಿ ಮತ್ತು ಡಾ॥ ಯು.ಆರ್. ಅನಂತಮೂರ್ತಿವರಂಥ ಪ್ರಮುಖ ವಿಮರ್ಶಕರು ಗುರುತಿಸಿದ್ದಾರೆ.

ಸಮಕಾಲೀನ ದಲಿತ ಸಾಹಿತ್ಯವೂ ತನ್ನ ಸೃಷ್ಟಿಕ್ರಿಯೆಯ ಹಿಂದೆ ಕನ್ನಡ ಸಾಹಿತ್ಯದ ಆಚಂದ್ರಾರ್ಕ ಶ್ರೀಮಂತ ಪರಂಪರೆಯನ್ನು, ವೈವಿಧ್ಯಮಯ ಹಿನ್ನೆಲೆಯನ್ನು ಹೊಂದಿರುವುದು. ಮಾತ್ರವಲ್ಲದೆ ತುಂಬ ಸಂಕೀರ್ಣವಾದ ಸಾಮಾಜಿಕ ಸಂದರ್ಭ ಕೂಡಿ ಇಂದಿನ ದಲಿತ ಸಾಹಿತಿಯ ಎದುರಿಗಿದೆ. ಇಂಥಹ ಒಂದು ಸಂಕೀರ್ಣ ಸಮಾಜ ಜೀವನವನ್ನು ಸಮಗ್ರವಾಗಿ ಕಟ್ಟಿಕೊಡಬೇಕಾದ ಮಹತ್ವದ ಕೃತಿಗಳು ಕನ್ನಡ ದಲಿತ ಸಾಹಿತ್ಯದಲ್ಲಿ ಇನ್ನೂ ನಿರ್ಮಾಣವಾಗಬೇಕಿದೆ.

ಕನ್ನಡ ದಲಿತ ಸಾಹಿತ್ಯ ಚಳುವಳಿಯು ಮರಾಠಿ ದಲಿತ ಸಾಹಿತ್ಯ ಚಳುವಳಿ ಹಾಗೂ ಡಾ॥ ಅಂಬೇಡ್ಕರ್, ಲೋಹಿಯಾ, ಮಾರ್ಕ್ಸ್‌ವಾದದ ಪ್ರಭಾವ ಪ್ರೇರಣೆಯಿಂದ ರೂಪುಗೊಂಡಿತು. ಆದರೂ ವಚನ ಸಾಹಿತ್ಯ ಹಾಗೂ ಆಧುನಿಕ ಕನ್ನಡ ಸಾಹಿತ್ಯ ಈ ನೆಲದೊಡಲಲ್ಲಿ ಮೂಡಿಬಂದ ಜನಪರ ಹೋರಾಟಗಳ ಪ್ರೇರಣೆಯೂ ಇಲ್ಲ ಎಂದು ಹೇಳಲಾಗುವುದಿಲ್ಲ.

ದಲಿತರ ಬದುಕು-ಸಂಸ್ಕೃತಿಯನ್ನು ಕುರಿತು ದಲಿತ ಲೇಖಕರೇ ಬರೆದಾಗಿನ ದಲಿತಾನುಭವ ನೋವು ನಲಿವು ಅಂತರ್ಯದ ತುಡಿತ - ಮಿಡಿತ ಹಾಗೂ ಪ್ರಾಮಾಣಿಕತೆಯ ಅಭಿವ್ಯಕ್ತಿಯ ಕೃತಿಯ ಚಿತ್ರಣಕ್ಕೂ ದಲಿತೇತರರು ಕಂಡು ಬರೆದ ಸಾಹಿತ್ಯಕ್ಕೂ ಅಂತರ ಇದ್ದೇ ಇರುತ್ತದೆ ಎಂಬುದು. ಆದರೆ ಇವನ್ನು ದಲಿತೇತರು ಬರೆದ ಕೃತಿಯೊಂದಿಗೆ ಹೋಲಿಸಿ ತಾಳೆ ನೋಡಿದಾಗ ದಲಿತರೂ ಬರೆದ ಕೃತಿ ದಲಿತೇತರೂ ಬರೆದ ಕೃತಿಗಳು ಎಷ್ಟು ಫಲಕಾರಿಯಾಗಿವೆ ಎಂಬುದನ್ನು ತಿಳಿಯಬಹುದು.

ಪ್ರಾಚೀನ ಹಾಗೂ ಮಧ್ಯಕಾಲೀನ ಸಾಹಿತ್ಯದ ಒಡಲಲ್ಲಿ ಅನೇಕ ಬಂಡಾಯದ ನೆಲೆಗಳಿದ್ದವು. ಇವುಗಳನ್ನು ವಚನ ಸಾಹಿತ್ಯ, ಸೂಫಿ ಸಾಹಿತ್ಯ, ಅನುಭವ ಸಾಹಿತ್ಯದ ಆಶಯಗಳಲ್ಲಿ ಖಂಡಿತಾ

ಶೋಧಿಸಲು ಸಾಧ್ಯವಿದೆ. ಅದರಂತೆ ಬಹುತೇಕ ಜನಪದರ ಕಥನ ಕಾವ್ಯ ಮತ್ತು ಮಹಾಕಾವ್ಯಗಳ ಅಂತರಂಗ ಶೋಷಿತ ಬದುಕಿನ ಸಂಕಥನಗಳೇ ಆಗಿವೆ. ಒಂದು ರೀತಿಯಲ್ಲಿ ಇವೆಲ್ಲ ಆಧುನಿಕ ಕನ್ನಡ ದಲಿತ ಸಾಹಿತ್ಯದ ಆಯಾಮಗಳಿಗೆ ಹಿನ್ನೆಲೆಯಾಗಿವೆ. ಕನ್ನಡ ಸಾಹಿತ್ಯ ಪರಂಪರೆ ಮತ್ತು ದಲಿತ ಸಾಹಿತ್ಯದ ನಡುವೆ ಒಂದು ಸಂಘರ್ಷ ಸ್ವರೂಪಿ ಏರ್ಪಟ್ಟಿರುವುದಂತೂ ನಿಜ.

ದಲಿತ ಸಾಹಿತ್ಯವೆಂದರೆ ದಲಿತರ ಶೋಷಣೆಯನ್ನು ಚಿತ್ರಿಸುವ ಕೃತಿ. ಅದನ್ನು ದಲಿತರೇ ಚಿತ್ರಿಸಿದ್ದರೆ ಅದು ನಿಜವಾದ ದಲಿತ ಸಾಹಿತ್ಯ ಎಂಬ ಒಂದು ಹೇಳಿಕೆ ಇದೆ. ಹಾಗೆಂದಾಗ ಮೂಲಭೂತವಾಗಿ ದಲಿತರಿಗೆ ಎದುರುಗೊಳ್ಳುವ ಪ್ರಶ್ನೆವಂತರೂ ದಲಿತರು ರಚಿಸಿದ ಎಲ್ಲಾ ಸಾಹಿತ್ಯವೂ ದಲಿತ ಸಾಹಿತ್ಯವೇ ಎನ್ನುವುದು. ಆದರೆ ಒಬ್ಬ ದಲಿತ-ದಲಿತಸಾಹಿತ್ಯ ಸೃಷ್ಟಿಗೆ ತೊಡಗಿದಾಗ ಆತ ಕೇವಲ ದಲಿತನಾಗಿದ್ದಾರೆ ಸಾಲದು ಅತನಿಗೆ 'ದಲಿತ ಪ್ರಜ್ಞೆ' ಎನ್ನುವುದು ಇರಬೇಕು.

ಇದೇ ಸಂದರ್ಭದಲ್ಲಿ ಇನ್ನೊಂದು ವಿಚಾರ ಸ್ಪಷ್ಟಪಡಿಸುವುದು ಅವಶ್ಯಕವೆನಿಸುತ್ತದೆ. ಅದೆಂದರೆ 'ದಲಿತ ಸಾಹಿತಿ ಕೇವಲ ಸಾಹಿತ್ಯವನ್ನು ಮಾತ್ರ ಸೃಷ್ಟಿಸಬಲ್ಲ ಎನ್ನುವ ವಿಚಾರವಿದ್ದರೆ ತಪ್ಪು ಆತ ಸಾರ್ವತ್ರಿಕ ಸಮಸ್ಯೆಗಳಿಗೂ ಸ್ಪಂದಿಸುತ್ತಾನೆ, ಬರೆಯತ್ತಾನೆ, ಬಂಡೇಳುತ್ತಾನೆ'[೧]

ಮನುಷ್ಯ ಸಮಾಜದಿಂದ ಬಹಿಷ್ಕತನಾದ ಅಸ್ಪೃಶ್ಯನ ಅನುಭವ ಇತರರಿಗಿಂತಲೂ ಭಿನ್ನವಾದವು ಈ ಭಿನ್ನವಾದ ಅನುಭವದಿಂದಲೂ ದಲಿತ ಸಾಹಿತ್ಯ ಗಟ್ಟಿತನದಿಂದ ಅಥವಾ ತಾಜಾತದಿಂದ ಕೂಡಿರುತ್ತದೆ. ಆದ್ದರಿಂದ ಇಂಥಹ ನ್ಯೂನತೆಯ ಬದುಕಿನ ಸ್ವಾ ಅನುಭವವಿಲ್ಲದವರಿಂದ ಅಭಿವ್ಯಕ್ತಗೊಂಡ ಸಾಹಿತ್ಯದಲ್ಲಿ ಎಷ್ಟು ಒಳಗಣ್ಣಿದ್ದರೂ ಅದು ಮೇಲು ನೋಟದ್ದಾಗಿರುತ್ತದೆ. ಹೀಗಿರುವುದರಿಂದ ದಲಿತೇತರ ವ್ಯಕ್ತಿ ದಲಿತನ ಹಾಗೆ ಪ್ರಮಾಣೀಕವಾದ ಕೃತಿ ಕೊಡಲು ಸಾಧ್ಯವಿಲ್ಲ. ಹೀಗಾಗಿ ದಲಿತೇತರರು ಬರೆದಿರುವುದು ದಲಿತ ಸಾಹಿತ್ಯವಾಗಲಾರದು ಎನ್ನುವ ವಿಚಾರವನ್ನು ಅರವಿಂದ ಮಾಲಗತ್ತಿಯವರು ತಮ್ಮ 'ಸಾಹಿತ್ಯ ಸಂಸ್ಕೃತಿ ಮತ್ತು ದಲಿತ ಪ್ರಜ್ಞೆ' ಎಂಬ ಪುಸ್ತಕದಲ್ಲಿ ಮುಂದಿಡುತ್ತಾರೆ.

ಸಾಮಾಜಿಕವಾಗಿ ಹಾಗೂ ಆರ್ಥಿಕವಾಗಿ ಶತಮಾನಗಳಿಂದ ಶೋಷಣೆಗೆ ಅಪಮಾನಕ್ಕೆ ಕ್ರೌರ್ಯಕ್ಕೆ ಬಲಿಯಾದ ದಲಿತ ಪ್ರಜ್ಞಾವಂತ ಲೇಖಕ ಬರೆದ ಪ್ರತಭಟನಾ ಸಾಹಿತ್ಯವೇ ಅಥೆಂಟಿಕ್ ಆದ ಸಾಹಿತ್ಯ ಎಂದು ಚಂದ್ರಶೇಖರ ಪಾಟೀಲರು ಅಭಿಪ್ರಾಯ ಪಟ್ಟಿದ್ದಾರೆ. ಹಾಗಾದರೆ ದಲಿತರೂ ಸೃಷ್ಟಿಸಿದ ಸಾಹಿತ್ಯ ಮಾತ್ರ ದಲಿತ ಸಾಹಿತ್ಯ ಎಂದು ಭಾವಿಸಿದರೆ ಅದು ತಪ್ಪಾಗುತ್ತದೆ ಏಕೆಂದರೆ ದಲಿತೇತರಾದ ಯು.ಅರ್. ಅನಂತಮೂರ್ತಿ, ಶಿವರಾಮಕಾರಂತರೂ, ಎಸ್.ಎಲ್. ಭೈರಪ್ಪ, ಕುವೆಂಪು ಮುಂತಾದ ಲೇಖಕರು

ದಲಿತ ಬವಣೆಯನ್ನು ತೆರೆದಿಡುವಲ್ಲಿ ಯಶಸ್ವಿಯಾಗಿರುವುದನ್ನು ನಾವು ಕಾಣಬಹುದು. ದಲಿತ ಸಾಹಿತ್ಯ ಕುರಿತು ಚರ್ಚೆಯನ್ನು ಎತ್ತಿದವರೆಲ್ಲಾ ಅಧಿಕೃತವಾಗಿ ದಲಿತೇತರರೇ ಆಗಿದ್ದಾರೆ ಎನ್ನುವುದನ್ನು ಗಮನಿಸಬೇಕು. ಆದ್ದರಿಂದ ದಲಿತರಿಗೆ ದಲಿತೇತರೆಲ್ಲರೂ ಒಂದೇ ಎಂದು ಮನಗಾಣಬೇಕಾಗಿದೆ. ಹೀಗೆ ಮನಗಂಡಾಗ ಮಾತ್ರ ದಲಿತರು ಹೊಸದನ್ನು ಸೃಷ್ಟಿಸಲು ಸಾಧ್ಯ ಮತ್ತು ದಲಿತೇತರಿಂದ ಏನಾದರೂ ಹೊಸದನ್ನು ಪಡೆದುಕೊಳ್ಳಲು ಸಾಧ್ಯ. ದಲಿತರು ಮತ್ತು ದಲಿತೇತರ ಹಿಂದಿರುವ ವಿವಾದಾಸ್ಪದ ವಿಚಾರಗಳನ್ನು ಗಮನಿಸಿದ ನಂತರ ಈ ಹಿಂದೆ ಚರ್ಚಿಸಿದ ಎಲ್ಲಾ ವಿಷಯಗಳನ್ನು ಗಮನದಲ್ಲಿಟ್ಟುಕೊಂಡು ಬರಹಗಾರರ ವಿಮರ್ಶಕರ ಅಭಿಪ್ರಾಯಗಳನ್ನು ಗಮನಲ್ಲಿಟ್ಟುಕೊಂಡು ದಲಿತ ಸಾಹಿತ್ಯವನ್ನು ಈ ಕೆಳಗಿನಂತೆ ವಿಂಗಡಿಸಕೊಳ್ಳಬಹುದು. ಇದು ಅರವಿಂದ ಮಾಲಗತ್ತಿಯವರ ವಿಂಗಡಣೆಯಾಗಿದೆ.

೧. ದಲಿತ ಸಾಹಿತ್ಯ

೨. ದಲೀತಿಯ ಸಾಹಿತ್ಯ

೩. ದಲಿತೇಯ ಸಾಹಿತ್ಯ

೪. ಅಂಶಿಕ ದಲಿತ ಸಾಹಿತ್ಯ

<u>೧. ದಲಿತ ಸಾಹಿತ್ಯ:</u> ದಲಿತರು ಮತ್ತು ದಲಿತೇತರು ದಲಿತ ಪ್ರಜ್ಞೆಯಿಂದ ದಲಿತರನ್ನು ಕುರಿತು ಸೃಷ್ಟಿಸಿದ ಸಾಹಿತ್ಯವೇ ದಲಿತ ಸಾಹಿತ್ಯ.

<u>೨. ದಲಿತೀಯ ಸಾಹಿತ್ಯ:</u> ದಲಿತರು ಪ್ರಜ್ಞೆಯಿಂದ ದಲಿತ ಪ್ರಜ್ಞೆಯಿಂದ ದಲಿತತ್ವದ ಕುರಿತು ಬರೆದ ಸಾಹಿತ್ಯ 'ದಲಿತೀಯ ಸಾಹಿತ್ಯ' ಒಂದು ವಿಚಾರ ಇಲ್ಲಿ ಸ್ಪಷ್ಟ. ದಲಿತರು ಕೇವಲ ದಲಿತ ಸಾಹಿತ್ಯವನ್ನು ಮಾತ್ರ ಸೃಷ್ಟಿಸಬಲ್ಲರು ಎಂಬುದಿಲ್ಲ ಅವರು ಬಂಡಾಯ ಸಾಹಿತ್ಯವನ್ನು ಸೃಷ್ಟಿಸಬಲ್ಲರೂ ಆದರೆ ದಲಿತ ಪ್ರಜ್ಞೆಯುಳ್ಳ ದಲಿತ ಸಾಮಾನ್ಯವಾಗಿ ದಲಿತೀಯ ಸಾಹಿತ್ಯದ ಬರವಣಿಗೆಯಲ್ಲಿ ತೊಡಗಿರುತ್ತಾನೆ.

<u>೩. ದಲಿತೇಯ ಸಾಹಿತ್ಯ:</u> ಪ್ರಗತಿಪರ ದಲಿತೇತರರು ದಲಿತ ಪ್ರಜ್ಞೆಯನ್ನೊಳಗೊಂಡು ದಲಿತರನ್ನು ಹಿನ್ನಲೆಯಾಗಿಟ್ಟುಕೊಂಡು ಅಥವಾ ದಲಿತರನ್ನು ಕುರಿತು ಬರೆದುದು ದಲಿತೀಯ ಸಾಹಿತ್ಯ ಇಲ್ಲಿ ದಲಿತನೇ ಕೇಂದ್ರ ವ್ಯಕ್ತಿಯಾಗಿರಬೇಕೆಂದು ನಿಯಮವಿಲ್ಲ. ಪಕ್ವರಾದ, ಅದಿಕೃತ ಸಂಪರ್ಕವುಳ್ಳ ದಲಿತೇತರ ಬರಹಗಾರ ದಲಿತರನ್ನು ಕೇಂದ್ರವಾಗಿಟ್ಟು ಬರೆಯಬಲ್ಲ.

೪. ಆಂಶಿಕ ದಲಿತ ಸಾಹಿತ್ಯ: ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಅಲ್ಲಲ್ಲಿ ವ್ಯಕ್ತವಾಗಿರುವ ದಲಿತರ ಕುರಿತು ಪ್ರತಿಭಟನಾ ಮನೋಧರ್ಮದ ಆಂಶಿಕ ಸ್ವರೂಪವನ್ನು ಗುರುತಿಸುವ ಇಲ್ಲವೇ ಅಧ್ಯಯನದ ಕಾರ್ಯ ಎತ್ತಿ ಹೇಳುವಂತಹದು 'ಆಂಶಿಕ ದಲಿತ ಸಾಹಿತ್ಯ' ಎಂದು ಕರೆಯಿಸಿಕೊಳುತ್ತದೆ.

ಒಟ್ಟಾರೆಯಾಗಿ ಹೇಳುವುದಾದರೆ ದಲಿತರು, ದಲಿತೇತರು ದಲಿತ ಪ್ರಜ್ಞೆಯಿಂದ ಅಭಿವ್ಯಕ್ತಪಡಿಸಿದ ಸಾಹಿತ್ಯವೇ 'ದಲಿತ ಸಾಹಿತ್ಯ' ಎಂದು ಪರಿಗಣಿಸುವುದರೊಂದಿಗೆ ದಲಿತೇತರರು ದಲಿತ ಪ್ರಜ್ಞೆಯಿಂದ ದಲಿತರನ್ನು ಕುರಿತು ಬರೆದಿದ್ದು 'ದಲಿತೀಯ ಸಾಹಿತ್ಯ'ವೆಂದು ದಲಿತರೂ ದಲಿತ ಪ್ರಜ್ಞೆಯಿಂದ ಕುರಿತು ಬರೆದದ್ದು ದಲೀತೇಯ ಸಾಹಿತ್ಯವೆಂದು ಪರಿಗಣಿಸಲಾಗಿದೆ ಎಂದರೆ 'ದಲಿತೇಯ ಸಾಹಿತ್ಯ' ಮತ್ತು 'ದಲಿತೀಯ ಸಾಹಿತ್ಯ' ಎರಡೂ ಸೇರಿಯೇ ದಲಿತಸಾಹಿತ್ಯವಾಗುತ್ತದೆ ಎಂದು ತಿಳಿಯಬಹುದು.

ಈ ಹಿನ್ನೆಯಲ್ಲಿ ಬಂದ ಸಾಹಿತ್ಯದ ಕೆಲವು ಮೈಲಿಗಲ್ಲುಗಳನ್ನು ಈಗ ಗಮನಿಸಬಹುದು. ಈ ಹಿಂದಿನ ಕಾವ್ಯಮಾರ್ಗಗಳಲ್ಲಿ ಸಾಮಾನ್ಯವಾಗಿ ಅನ್ಯಾಯಕ್ಕೊಳಗಾದವರ ಪರವಾಗಿ ಬೇರೆಯವರ ಬರೆಯುತ್ತಿದ್ದಾರೆ. ಇಲ್ಲಿ ದಲಿತರ ನೋವುಗಳನ್ನು ದಲಿತರೂ ಮಹಿಳೆಯರ ಸಮಸ್ಯೆಗಳನ್ನು ಮಹಿಳೆಯರೂ ಬರೆದಿರುವುದರಿಂದ ಒಂದು ಹೆಚ್ಚಿನ ಅಧಿಕೃತ ಅಥವಾ ಬರವಣಿಗೆಗಳಿಗೆ ಸಿಕ್ಕಾಂತಾಗಿದೆ. ತಮ್ಮ ಹೊಲೆ ಮಾದಿಗರ ಹಾಡು, 'ಸಾವಿರಾರು ನದಿ' 'ಕಪ್ಪು ಕಾಡಿನ ಕಾಡು' ಕವನ ಸಂಕಲನಗಳಿಂದಲೂ 'ಪಂಚಮ' 'ನೆಲಸಮ', 'ಏಕಲವ್ಯ' ಮೊದಲಾದ ನಾಟಕಗಳಿಂದಲೂ ವೈಚಾರಿಕ ಬರಹಗಳಂದಲೂ ಜನರನ್ನು ಮುಟ್ಟಲು ಯತ್ನಿಸಿದವರೂ ಸಿದ್ದಲಿಂಗಯ್ಯ.

ದಲಿತ ಧೋರಣೆಗಳನ್ನು ತುಂಬ ಪರಿಣಾಮಕಾರಿಯಾಗಿ ಕಲಾತ್ಮಕವಾಗಿ ಗಧ್ಯದಲ್ಲಿ ತಂದ ಲೆಖಕ ದೇವನೂರು ಮಹದೇವ ದ್ಯಾವನೂರು ಕಥಾ ಸಂಕಲನದ ಕಥೆಗಳು ಹಾಗೂ ನೀಳ್ಗತೆಯಿಂದ ಒಡಲಾಳವು ದೇವನೂರರ ವಿಶಿಷ್ಟ ಭಾಷಾ ಬಳಕೆ ಅಕ್ರೋಶ ರಹಿತ ನಿರ್ಲಿಪ್ತ ಕಥನ ರೀತಿಯಲ್ಲಿ ದಲಿತ ಬದುಕಿನ ದುರಂತವಲಯವನ್ನು ಹಿಡಿಯುವಿಕೆ ರಚನಾತ್ಮಕ ಸಾದ್ಯತೆಗಳನ್ನು ಪರಿಣಾಮಕಾರಿಯಾಗಿ ಸೂಚ್ಯವಾಗಿಡುವಂತೆ ಒಪ್ರತಿಮಾತ್ಮಕ ನಿರೂಪಣೆ ಇಂಥ ಎಲ್ಲಾ ಗುಣಗಳಿಂದಾಗಿ ಕನ್ನಡದ ವಿಶಿಷ್ಟ ಕೃತಿಗಳಾಗಿವೆ.

ಅರವಿಂದ ಮಾಲಗಿತ್ತಿಯವರ ಮೂಕನಿಗೆ ಬಾಯಿ ಬಂದಾಗ ಎನ್ನುವ ಕವನ ಸಂಕಲನ ಕಾರ್ಯ ಕಾದಂಬರಿ ಮುಖ್ಯವಾದವು ಮ.ನ.ಜವರಯ್ಯ ಅವರ 'ಮಾಗಿ' ಕಾದಂಬರಿ ದಲಿತ ಮಹಿಳೆಯೊಬ್ಬಳ

ಬದುಕಿನ ಅನಾವರಣವಾಗಿದೆ. ಬದುಕಿಗೆ ಬೆನ್ನು ಸಾಕದೆ ಛಲದಿಂದ ಹೋರಾಡುವ ಜೀವನೋತ್ಸಾಹದೊಂದಿಗೆ ದಲೀತೀಯತೆಯ ಅನುಭವಗಳನ್ನು ಕಟ್ಟಿಕೊಡುತ್ತಾರೆ.

ಇನ್ನೂ ದಲಿತೇತರ ಕವಿಗಳಲ್ಲಿ ಕಂಡು ಬರುವ ದಲಿತ ಪ್ರಜ್ಞೆಯನ್ನು ಗಮನಿಸಿದರೆ ಕುವೆಂಪು, ಕಾರಂತರು ಪ್ರಮುಖವಾಗು ನಿಲ್ಲುತ್ತಾರೆ ಕುವೆಂಪು ಅವರ ಮಲೆಗಳಲ್ಲಿ ಮದುಮಗಳು ಕದಂಬರಿ ಪ್ರಕಟಗೊಂಡಾಗ ಪಿ.ಲಂಕೇಶ್ ಈ ಕಾದಂಬರಿಯನ್ನು ಕುರಿತು ದಲಿತ ದಿಗ್ವಿಜಯ ಎಂದು ಬರೆದಿದ್ದರೂ ಈ ಮಾತು ಕಾರಂತರ ಚೋಮನ ದುಡಿ ಕಾದಂಬರಿಗೂ ಅನ್ವಯವಗುತ್ತದೆ ಚೋಮ ಆ ವರ್ಗದ ಜನರ ಪ್ರಾತಿನಿಧಿಕ ವ್ಯಕ್ತಿಯಾಗಿ ಬರುವುದರಿಂದ ದಲಿತಭಾರತದ ಒಂದು ಸಾಂಕೇತಿಕ ರೀತಿಯಲ್ಲಿ ಕೃತಿ ಕೆಲಸ ಮಾಡುತ್ತದೆ.

ಹೀಗೆ ದಲಿತೇತರ ಲೇಖಕರಿಂದಲೇ ಕಂಡು ಬಂದಂತಹ ದಲಿತ ಪ್ರಜ್ಞೆಯು ಮುಂದೆ ದಲಿತರ ಕೈಗೆ ಸಿಕ್ಕಿ ವಿಶಾಲವಾದ ಅರ್ಥವನ್ನು ಪಡೆದುಕೊಳ್ಳುತ್ತಾ ಹೋಯಿತು. ಸಮಾಗ್ರಿ ಶಿಲ್ಪ, ಬಂಧ, ಭಾಷೆಯಲ್ಲಿ ಬದಲಾವಣೆಗಳನ್ನು ಪಡೆದುಕೊಂಡು ಸಾಮಾನ್ಯ ಜನರಿಗೂ ಮನಸ್ಸನ್ನು ತಟ್ಟುವಂತೆ ಮಾಡಿದವು.

## ಅಧ್ಯಾಯ – ೩

## ಕಾರಂತರು – ವ್ಯಕ್ತಿ ಮತ್ತು ಸೃಜನಶೀಲತೆ

ಹೊಸಗನ್ನಡದ ಗದ್ಯಶೈಲಿಗೆ ವಿಶಿಷ್ಟ ಕಾಣಿಕೆಯನ್ನಿತ್ತ ಮುದ್ದಣ್ಣ, ಅದನ್ನು ವಿಫುಲವಾಗಿ ಬೆಳೆಯಿಸುವ ಮುನ್ನವೇ ಕಣ್ಮರೆಯಾದದ್ದು ಕನ್ನಡದ ದೌರ್ಭಾಗ್ಯ ಈ ಶತಮಾನ ತೊಡಗುವಾಗಲೇ ಮುದ್ದಣ್ಣ ಗತಿಸಿದ್ದರಿಂದ ಉಂಟಾದ ಶೂನ್ಯವನ್ನು ತುಂಬಿಕೊಡಲೋ ಎಂಬಂತೆ ಹುಟ್ಟಿಕೊಂಡ ಕಾರಂತರು ಯುಗಮಾನಕ್ಕೆ ಸಲ್ಲುವ ಶ್ರೇಷ್ಠ ಸಾಹಿತಿಯೆನಿಸಿಕೊಂಡದ್ದು ಕನ್ನಡದ ಸೌಭಾಗ್ಯ. ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ 'ಕಾರಂತಯುಗ' ಎಂಬ ಹೊಸ ಅಧ್ಯಾಯವನ್ನೇ ಬರೆಸಿದ ಸಾಹಸಿಗರು ಕಾರಂತರು.

ಕನ್ನಡ ಗದ್ಯ ಸಾಹಿತ್ಯ ಹಳೆಗನ್ನಡದ ಹಿಡಿತದಲ್ಲೇ ಇದ್ದು, ಸೊಗಸಾಗಿ ಕಾವ್ಯಮಯವಾಗಿದ್ದರೂ ಜನಸಾಮಾನ್ಯರಿಗೆ ಕಬ್ಬಿಣದ ಕಡಲೆಯಾಗಿದ್ದಾಗ ಆಧುನಿಕ ಸರಳ ಕನ್ನಡದಲ್ಲಿ ಕಾದಂಬರಿಗಳನ್ನು ರಚಿಸಿ ಕನ್ನಡ ಗದ್ಯ ಸಾಹಿತ್ಯಕ್ಕೆ ಹೊಸ ಆಯಾಮ ಒದಗಿಸಿದವರು ಆಲೂರು ವೆಂಕಟರಾಯರು, ಗಳಗನಾಥ ಹಾಗೂ ಇತರರು ಇದೇ ಪ್ರವೃತ್ತಿಯನ್ನು ಮುಂದುವರೆಸಿಕೊಂಡು ನೂರಾರು ಕಾದಂಬರಿಗಳನ್ನು ರಚಿಸಿ ಗದ್ಯ ಸಾಹಿತ್ಯವನ್ನು ಅತ್ಯಂತ ಜನಪ್ರಿಯಗೊಳಿಸಿದರು ಅ.ನ.ಕೃ. ರವರು. ಆದರೆ ಆಂಗ್ಲರ ಪ್ರಭಾವದಿಂದಾಗಿ ಕನ್ನಡ ಸಾಹಿತ್ಯವನ್ನು ಓದುವುದೇ ಒಂದು ಕೀಳರಿಮೆಯಂತಿದ್ದ ಸಮಯದಲ್ಲಿ ಕನ್ನಡ ಗದ್ಯ ಸಾಹಿತ್ಯದಲ್ಲಿ ತಮ್ಮದೇ ವಿಶಿಷ್ಟ ಶೈಲಿಯನ್ನು ಅಳವಡಿಸಿಕೊಂಡು, ವಾಸ್ತವಿಕ ಜೀವನಕ್ಕೆ ಹತ್ತಿರವಾಗಿದ್ದು, ಜೀವನ ಬಗೆಗೆ ವಿಚಾರವಂತ ದೃಷ್ಟಿಕೋನವನ್ನು ಬೆಳಸಿಕೊಳ್ಳಲು ಸಹಾಯಕವಾಗುವಂತಹ ಪ್ರೌಢಕಥಾ ವಸ್ತುಗಳುಳ್ಳ ಕಾದಂಬರಿಗಳನ್ನು ಉನ್ನತ ಗುಣಮಟ್ಟದ ಭಾವ ಅಭಿವ್ಯಕ್ತತೆಯ ಸಾರ್ಥಕತೆಯನ್ನು ಸಾಧಿಸಿ ಕನ್ನಡ ಗದ್ಯ ಸಾಹಿತ್ಯದ ಹಿರಿಮೆ ಗೌರವ ಹೆಚ್ಚಿಸಿದವರಲ್ಲಿ ಶಿವರಾಮಕಾರಂತರು ಅಗ್ರಗಣ್ಯರು.

**ವ್ಯಕ್ತಿ:** ಮಾನವನು 'ಜೀವನ ಪ್ರವಾಹದ ಒಂದು ಅಂಶ ಬಹುಕಾಲದಿಂದ ಹರಿಯುವ ನದಿಯೊಂದರಲ್ಲಿ ನಾವು ಈ ಗಳಿಗೆಯಲ್ಲಿ ಯಾವುದಾದರೊಂದು ಜಲಕಣವನ್ನೋ ಜಲಭಾಗವನ್ನು ಗುರುತಿಸಲಾರವೇ? ಆ ಕ್ಷಣಕ್ಕೆ ಗುರುತಿಸಬಲ್ಲೆವು. ಮರುಕ್ಷಣ ಆದರೆ ಅದು ನಾಶವಾಯಿತೇ? ನಿರರ್ಥಕವಾಯಿತೇ? ... ಜಲಕಣಗಳ ಚಟುವಟಿಕೆಗಳು ಕ್ಷಣಿಕವೆನಿಸಿಕೊಂಡರೂ, ನದಿಯ ಪ್ರವಾಹ ಮಾತ್ರ ಚಿರಂತನವಾಗಿ ಕಾಣುವುದಿಲ್ಲವೇ..'?

"ಜೀವನ ಪ್ರವಾಹದ ವ್ಯಕ್ತಿತ್ವ ಈ ತೆರನಾದುದು. ಒಂದು ವ್ಯಕ್ತಿಯಲ್ಲಿ ಪ್ರಕಟವಾದ ಶಕ್ತಿಗಳು ಅಭಿವೃದ್ಧಿಗೊಂಡು, ಅದನ್ನು ಅವನು ಬದುಕಿಗೆ ತಂದ ಶರೀರ ಸಾಯುವ ಮೊದಲೇ ಆ ಶಕ್ತಿಗಳು ಸುತ್ತಲಿನ ಆವರಣದಲ್ಲಿ ಅಂದರೆ, ಇತರ ವ್ಯಕ್ತಿಗಳ ಜೀವನದಲ್ಲಿ ಬೆರೆಯುತ್ತವೆ. ಈ ಮೂಲಕ ಅವು ಸಾವನ್ನೂ ಧಿಕ್ಕರಿಸಿ ಅಮರವಾಗುತ್ತವೆ... ಆ ವ್ಯಕ್ತಿ ತನ್ನ ಉದ್ದಾಮ ಜೀವನದಿಂದ ಇಲ್ಲವೆ ಉಜ್ವಲ ಪ್ರೇರಣೆಯಿಂದ, ಕಾಲವನ್ನು ಧಿಕ್ಕರಿಸಿ ನಿಲ್ಲಲು ಬರುತ್ತವೆ. ಅವನಾಡಿದ ಮಾತುಗಳು ನಾಣ್ಣುನುಡಿಗಳಾಗಬಹುದು. ಅವನು ಕಂಡು ಹಿಡಿದ ತತ್ವಗಳು ಗ್ರಂಥಸ್ಥವಾಗಿ ಸಾವಿರ ವರುಷಗಳ ಮುಂದಿನ ಬದುಕಿಗೆ ನೆರವಾಗಬಹುದು. ಅವನ ಕೃತಿಗಳು... ನೂರಾರು ವರ್ಷಗಳ ಬದುಕಿಗೆ ನೆರವಾಗಿ ಪರಿಣಾಮ ಉಂಟುಮಾಡಬಹುದು. ಅದರಿಂದಲೇ ಒಬ್ಬ ಬುದ್ಧನೋ, ಇನ್ನಾವ ಋಷಿಯೋ ಆಡಿದ ಮಾತು ಸುತ್ತಲಿನ, ಸಮಕಾಲೀನ ಜೀವನಕ್ಕೆ ಉಂಟುಮಾಡಿದ ಪರಿಣಾಮಕ್ಕಿಂತಲೂ ಹೆಚ್ಚಾಗಿ, ಸಾವಿರ ಎರಡು ಸಾವಿರ ವರ್ಷಗಳ ಬಳಿಕ ಜೀವನಕ್ಕೆ ಬೆಳಕನ್ನು ಕೊಡಲು ಸಾಧ್ಯವಾಯಿತು..... ಜೀವನದ ಪ್ರವಾಹದಿಂದಾಗಿ ಅಂದಿನ ಬುದ್ಧ ಇಂದಿನ ತನಕವೂ ಬದುಕಿರುವಚಿತೆ ಆಯಿತು."

ಮೇಲಿನ ಮಾತುಗಳನ್ನು ಕಾರಂತರು ಬರೆದ **'ಬಾಳ್ವೆಯೇ ಬೆಳಕು'** ಎಂಬ ಗ್ರಂಥದಿಂದ ಅರಿಸಿಕೊಳ್ಳಲಾಗಿದೆ. ಅವರು ಬಾಳ್ವೆ ಬದುಕು ಸುತ್ತಲೆಲ್ಲಾ ಬೆಳಕು ಹರಡಿ, ಇತರರ ಬಾಳನ್ನೂ, ಸಾರಸ್ವತ ಲೋಕವನ್ನು ಬೆಳಗಿ ಅಮರವಾಗಿದೆ.

ಕರ್ನಾಟಕ ರಾಜ್ಯದ ದಕ್ಷಿಣ ಜಿಲ್ಲೆಯ ಕೋಟ ಎಂಬ ಸುಂದರವಾದ ಹಳ್ಳಿ. ಈ ಶತಮಾನದ ಶ್ರೇಷ್ಠ ಸಾಹಿತಿ ಶಿವರಾಮ ಕಾರಂತರ ಜನ್ಮ ಸ್ಥಳವಾಗಿದೆ. ೧೯೦೨ ಅಕ್ಟೋಬರ್ ೧೦ರಲ್ಲಿ ಶೇಷಕಾರಂತ ಮತ್ತು ಲಕ್ಷ್ಮಿಯವರ ಮಗನಾಗಿ ಹುಟ್ಟಿದವರೇ ಶಿವರಾಮಕಾರಂತರು, ಇವರ ಅಜ್ಜಿ ಮಹಾಲಕ್ಷ್ಮಿ, ಇವರು ಬಹಳ ಸನಾತನಿಗಳು; ತಾಳ್ಮೆಯ ಮೂರ್ತಿಗಳು, ಧರ್ಮಶ್ರದ್ಧೆ ಇದ್ದವರು, ಶೇಷ ಕಾರಂತ ದಂಪತಿಗಳಿಗೆ ಒಟ್ಟು ೧೦ ಮಂದಿ ಮಕ್ಕಳು ಆದರೆ ಬಾಲ್ಯ ದಾಟಿ ಉಳಿದವರು ಎಂಟು ಜನ ಗಂಡುಮಕ್ಕಳು ಮತ್ತು ಇಬ್ಬರು ಹೆಣ್ಣು ಮಕ್ಕಳು ಕಾರಂತರು ಹಿರಿಯರು ತುಂಬಾ ಬಡತನದಲ್ಲಿ ಬೆಳೆದು ಬಂದವರು ಶೇಷ ಕಾರಂತರ ಅಜ್ಜನಿಗೆ ಇದ್ದದ್ದು ಕೇವಲ ಅರ್ಧ ಎಕರೆ ಜಮೀನು ಇವರ ಉತ್ಪನ್ನ ಜೀವನಕ್ಕೆ ಸಾಲದೆ ಮೂಡುಸೀಮೆಗೆ ಹೋಗಿ ದುಡಿಯುತ್ತಿದ್ದರು. ಮುಂದೆ ಶೇಷ ಕಾರಂತರು ಎಂಟಾಣಿ ಸಂಬಳದ ಐಗಳ ವೃತ್ತಿಯನ್ನು ಮಾಡಿ ಜೀವನ ಸಾಗಿಸಬೇಕಾಗಿತ್ತು. ಇದು ಕಷ್ಟವಾಗಿ ಕಂಡದ್ದರಿಂದ ಶೇಷ ಕಾರಂತರು ಸಾಲ ಪಡೆದು ಜವಳಿ ವ್ಯಾಪಾರ ಆರಂಭಿಸಿದರು. ಅವರು ಪ್ರಾಮಾಣಿಕ ವ್ಯಾಪಾರದಿಂದ ಶಿವರಾಮ ಕಾರಂತರು ಹುಟ್ಟುವ ಹೊತ್ತಿಗೆ ಬಡತನ ಮಾಯವಾಗಿ ಅನುಕೂಲ ಪರಿಸ್ಥಿತಿ ಉಂಟಾಗಿತ್ತು. ಕಾರಂತರು ಬಡತನ ಕಾಣದವರಾದರೂ ಹಾಗೆಂದು ಸಿರಿತನದ

ಸೋಗಿನಲ್ಲಿ ಬೆಳದವರಲ್ಲ. ಇವರ ತಾಯಿ ಅಬ್ಬೆಯರು ಅಪಾರವಾದ ಶ್ರದ್ಧೆ ಜೀವನ ಕ್ರಮವನ್ನು ಅನುಸರಿಸುತ್ತಿದ್ದವರಾಗಿದ್ದರು. ಇವರ ಹಳ್ಳಿಯ ಯಾವ ಮನೆಯಲ್ಲೂ ಕಾಣದಂತ ಪ್ರಾಣಿ ಪಕ್ಷಿಗಳ ಸಾಗಾಣಿಕೆ ಶೇಷ ಕಾರಂತರ ಮನೆಯ ವೈಶಿಷ್ಟವಾಗಿತ್ತು. ಪಾರಿವಾಳ, ಗಿಳಿ, ಮೊಲ, ಮುಂಗುಸಿ, ಬರ್ಕ, ನವಿಲು ಮುಂತಾದವುಗಳು ಸಾಗಾಣಿಕೆಯ ಈ ಬಾಲ್ಯದ ಪರಿಸರವೇ ಶಿವರಾಮ ಕಾರಂತರ ಜೀವನದಲ್ಲಿ ಪರಿಸರ ಪ್ರಜ್ಞೆಯನ್ನು ಪ್ರಾಣಿಪಕ್ಷಿ ಪ್ರೇಮವನ್ನು ಮೂಡಿಸಿದ್ದಿರಬೇಕು. ಕಾರಂತರು ವಿದ್ಯಾಭ್ಯಾಸ ಪ್ರಾರಂಭಿಸಿದ್ದು ಕೋಟಾದ ಹೀರೇಮಾಲಿಂಗೇಶ್ವರ ದೇವಾಲಯದ ಶಾಲೆಯಲ್ಲಿ ಇವರ ಬಾಲ್ಯದ ಆಟ, ಪಾಠ ವಿನೋದಗಳು ಹಳ್ಳಿಯ ಪರಿಸರದಲ್ಲೇ ವಿದ್ಯಾಭ್ಯಾಸ ಮುಗಿಸುತ್ತಲೇ ೧೯೧೨ರಲ್ಲಿ ಪ್ರೌಢಶಾಲೆ ಓದಿಗೆ ಕೋಟದಿಂದ ೮ ಮೈಲಿ ದೂರದ ಕುಂದಾಪುರಕ್ಕೆ ತೆರಳಬೇಕಾಯಿತು. ಅಲ್ಲಿ ಸುಮಾರು ಎಂಟು ವರ್ಷಗಳ ಕಾಲ ಅಭ್ಯಾಸ ಮಾಡಿದರು ಇವರ ಇಡೀ ವಿದ್ಯಾಭ್ಯಾಸದ ಜೀವನವೆಲ್ಲಾ ಸುಂದರ ಪ್ರಕೃತಿಯ ಮಡಿಲಿನಲ್ಲಿ ಆಗಿರುವುದನ್ನು ಕಾಣಬಹುದು. ಈ ಬಾಲ್ಯದ ಪ್ರಕೃತಿ ಮಡಿಲಿನ ಅನುಭವ ಅದರ ಮುಂದಿನ ಸಾಹಿತ್ಯದಲ್ಲಿ ಗಾಡ ಪ್ರಭಾವ ಬೀರಿರುವುದನ್ನು ಗಮನಿಸಬಹುದು. ೧೯೨೦ ರಲ್ಲಿ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ತೇರ್ಗಡೆಗೊಂಡ ಕಾರಂತರು ಮಂಗಳೂರಿನ ಸರ್ಕಾರಿ ಕಾಲೇಜು ಸೇರಿ ವಿಜ್ಞಾನ ಮತ್ತು ಗಣಿತಗಳನ್ನು ಐಚ್ಛಿಕ ವಿಷಯಗಳನ್ನಾಗಿ ಆರಿಸಿಕೊಂಡು ಓದನ್ನು ಮುಂದುವರಿಸಿದರು.

೧೯೧೨ರ ಪೆಬ್ರವರಿಯಲ್ಲಿ ಓದನ್ನು ನಿಲ್ಲಿಸಿ ಸ್ವಾತಂತ್ರ್ಯದ ಹೋರಾಟಕ್ಕೆ ಧುಮುಕಿದರು. ಮುಂದೆ ಗಾಂಧೀಜಿಯ ನಡವಳಿಕೆ ಮನೋಧರ್ಮ, ಆದರ್ಶ, ಬರಹ, ಉಪದೇಶಗಳನ್ನು ತರ್ಕಸರಣಿಗಳನ್ನು ಕಣ್ಣು ಮುಚ್ಚಿ ಒಪ್ಪಿಕೊಂಡು ರಾಷ್ಟ್ರೀಯ ಚಳುವಳಿಯಲ್ಲಿ ಕೆಲಸ ಮಾಡ ತೊಡಗಿದರು. ಅಂದಿನಿಂದ ಕಾರಂತರಿಗೆ ಬದುಕೇ ಶಿಕ್ಷಣ ಶಾಲೆಯಾಯಿತು. ದೇಶಸೇವೆ, ದೇಶ ಸಂಚಾರಗಳೇ ಉದ್ಯೋಗವಾಯಿತು. ಇವೆಲ್ಲವುಗಳ ಮಧ್ಯೆ ಕಾರಂತರು ಹುಟ್ಟಿ ಬೆಳೆದ ಬ್ರಾಹ್ಮಣ ಸಮಾಜದಲ್ಲಿ ರೂಢಿಯಲ್ಲಿದ್ದ ನಂಬಿಕೆಗಳು, ಆದರ್ಶಗಳು, ನಡವಳಿಕೆಗಳು, ತಪ್ಪು ಒಪ್ಪುಗಳು ಅವರ ಮನಸ್ಸಿನ ಮೇಲೆ ಹಾಯ್ದರು. ಅಸ್ಪೃಶ್ಯರು, ಬಿಲ್ಲವರು, ಕೊರಗರ ನೆರಳು ಬಾಲಕರಾಗಿದ್ದ ತಮ್ಮ ಮೇಲೆ ಹಾಯ್ದರೂ ಅಸ್ಪೃಶ್ಯರು ಮುಟ್ಟಿ ಬಂದಂತೆ ಮಿಚಿದೇ ಮನೆಯೊಳಗೆ ಕಾಲಿಸಿರಬೇಕಾದ ಪರಿಸ್ಥಿತಿ ಇದ್ದಿತು ಎಂಬುದಾಗಿ ಸ್ವತಃ ಕಾರಂತರೇ ಒಂದೆಡೆ ಸ್ಮರಿಸಿಕೊಂಡಿದ್ದಾರೆ.

೯೫ ವರ್ಷಗಳ ಕಾಲ ತುಂಬು ಜೀವನ ನಡೆಸಿದ ಕಾರಂತರು ಜೀವನದ ಬಗೆಗೆ ತೋರಿಸಿದ ಆದಮ್ಯ, ಹುಮ್ಮಸ್ಸು, ನಿರಂತರ ಆಸಕ್ತಿ ಅಸಾಧರಣವಾದದ್ದು. ಅವರಿಗಿದ್ದ ನಿಚ್ಚಳ ಪರಿಸರ ಪ್ರೇಮ, ಹುಟ್ಟು, ಸಾಹಿತ್ಯ, ಮನೋಧರ್ಮ, ವೈಜ್ಞಾನಿಕ ವಿಷಯಗಳಲ್ಲಿ ಅವರಿಗಿದ್ದ ಕುತೂಹಲ, ಸಂಶೋಧನಾ

ಪ್ರವೃತ್ತಿ, ಪ್ರಯೋಗಶೀಲ ಮನೋಭಾವ ಅದ್ಭುತವಾದದ್ದು. ಮನದಲ್ಲಿ ಯಾವುದೇ ಕುಹಕವನ್ನು ಇಟ್ಟುಕೊಳ್ಳದೆ ಇದ್ದುದನ್ನು ಇದ್ದಂತೆ ಹೇಳಿಬಿಡುವ ಅವರ ಸ್ವಭಾವ ನಿಷ್ಠುರವಾಗಿ ಕಂಡರು ನಿಜ ಹೇಳುವ ಅವರ ಎದೆಗಾರಿಕೆ ಮತ್ತು ಪ್ರಾಮಾಣಿಕತೆಯನ್ನು ಮೆಚ್ಚಬೇಕಾದುದೆ. ಪ್ರಾಯದಿಂದಲೂ ಸ್ವತಃ ನಾಸ್ತಿಕನಾಗಿದ್ದರೂ ಮುಂದೆ ಸೃಷ್ಟಿಕರ್ತನ ಅನಂತತೆಯ ನಿಜ ಸ್ವರೂಪದ ಅರಿವು ಮೂಡಿ ಆ ಶಕ್ತಿಯನ್ನು ಒಪ್ಪಿಕೊಂಡ ಹಿರಿಯ ಜೀವ ಕಾರಂತರದ್ದು. ಮೊದಲಿನಿಂದಲೂ ತಮ್ಮ ಸ್ವಂತ ನಂಬಿಕೆ ಏನೇ ಇದ್ದರೂ ದೇವರು, ದೇವಾಲಯಗಳ ಅವಶ್ಯಕತೆ ಆರೋಗ್ಯಕರ ಸಮಾಜದ ಬೆಳವಣಿಗೆಗೆ ಎಷ್ಟು ಅಗತ್ಯ ಎಂಬುದನ್ನು ಹಲವಾರು ಸಂದರ್ಭದಲ್ಲಿ ಅವರೇ ಪ್ರತಿಪಾದಿಸಿದ್ದಾರೆ. ನಮ್ಮ ಸಮಾಜದಲ್ಲಿ ಹಿಂದಿನಿಂದಲೂ ಬೆಳೆದು ಬಂದಿರುವ ಹಲವಾರು ನಂಬಿಕೆಗಳ ವಿರುದ್ಧ ಕಾರಂತರು ಬಂಡಾಯವೆದ್ದಿದ್ದರು. ಅವುಗಳನ್ನು ತೀವ್ರವಾಗಿ ಪ್ರತಿಭಟಿಸಿದ್ದರು. ಅಂತಹ ನಂಬಿಕೆಯುಳ್ಳವರನ್ನು ಕೀಳು ಮಾಡುವ ಉದ್ಧಟತನವಾಗಲೀ, ಅಹಂಕಾರವಾಗಲೀ ಕಾರಂತರಿಗೆ ಇರಲಿಲ್ಲ. ಕಾರಂತರು ಇತರ ವ್ಯಕ್ತಿಗಳನ್ನು ಗೌರವಿಸುತ್ತಿದ್ದಂತೆ ಅವರ ನಂಬಿಕೆಗಳನ್ನು ಗೌರವಿಸುತ್ತಿದ್ದರು. ಕಾರಂತರು ಸಂಪ್ರದಾಯಸ್ಥ ಬ್ರಾಹ್ಮಣ ಕುಟುಂಬದಲ್ಲಿ ಹುಟ್ಟಿ ಬೆಳೆದಿದ್ದರೂ ಸಂಪ್ರದಾಯಬದ್ಧ ಸಮಾಜಕ್ಕೆ ಅವರು ನೀಡಿದ ಚಾಟಿಯೇಟೆಂದರೆ ೧೯.೦೫.೧೯೩೬ರಲ್ಲಿ ಅಂತರ್ಜಾತಿಯ ವಿವಾಹ ಬಂಧನಕ್ಕೆ ಒಳಗಾಗಿ ಲೀಲಾ ಅವರನ್ನು ಬಾಳ ಸಂಗಾತಿಯನ್ನಾಗಿ ಪಡೆದು ಮುಂದೆ ಲೀಲಾ ಜೊತೆ ೫೦ ವರ್ಷಗಳಷ್ಟು ದೀರ್ಘಕಾಲೀನ ದಾಂಪತ್ಯ ಜೀವನ ಸಾಗಿಸಿರುವುದನ್ನು ಕಾಣಬಹುದು.

ಇಂತಹ ಮಹಾಚೇತನವಾದ ಕನ್ನಡದ ಹೆಮ್ಮೆಯ ನಡೆದಾಡುವ ವಿಶ್ವಕೋಶ ಎಂದೇ ಗುರುತಿಸಿಕೊಂಡಿದ್ದ ಕಾರಂತರು ೧೯೯೭, ಡಿಸೆಂಬರ್ ೯ ರಂದು ನಮ್ಮನ್ನಗಲಿದರು.

**ಸೃಜನ ಶೀಲತೆ :**

ಮನುಷ್ಯನಿಗೆ ಮಾತು ಎಷ್ಟು ಸಲೀಸಾದುದೋ, ಶಿವರಾಮ ಕಾರಂತರಿಗೆ ಬರವಣಿಗೆ ಅಷ್ಟೆ ಸಲೀಸಾದ ಕಾಯಕವಾಗಿತ್ತು. ಅವರು ಕಾದಂಬರಿ, ಕವನ, ನಾಟಕ, ವಯಸ್ಕರ ಶಿಕ್ಷಣ ಗ್ರಂಥ, ವೈಜ್ಞಾನಿಕ ಕೃತಿಗಳು, ಅರ್ಥಕೋಶ, ಪ್ರವಾಸ ಕಥನ, ವಿಡಂಬನೆ, ಮಕ್ಕಳ ಸಾಹಿತ್ಯ ಹೀಗೆ ನೂರಾರು ವೈವಿಧ್ಯಮಯ ಕೃತಿಗಳನ್ನು ರಚಿಸಿ ಕನ್ನಡ ಸಾರಸ್ವತ ಲೋಕವನ್ನು ಶ್ರೀಮಂತಗೊಳಿಸಿದವರು.

ಅರೇಳು ದಶಕಗಳ ಕಾಲ ಸಾಗಿದ ಅವರ ಲೇಖನ ವ್ಯವಸಾಯ ಪ್ರಜ್ಞಾಹೀನರಾಗುವ ತನಕವು ಸಾಗಿದುದು ಅವರ ಧೈರ್ಯ-ಸ್ಥೈರ್ಯ ಮನೋಬಲ, ಮನೋಧರ್ಮಗಳ ಗಟ್ಟಿತನಕ್ಕೆ ಸಾಕ್ಷಿ. ಮನುಷ್ಯ

ಸ್ವಭಾವದ ಹಾಗೂ ಮಾನವ ಸಂಬಂಧದ ಕ್ಲಿಷ್ಟತೆಗಳನ್ನು ಅತ್ಯಂತ ಸರಳ ಶೈಲಿಯಲ್ಲಿ ಎಲ್ಲರ ಮನ ಮುಟ್ಟುವಂತೆ ಸುಂದರವಾಗಿ ಚಿತ್ರಿಸುವ ಅಸಮಾನ್ಯ ಸಾಮರ್ಥ್ಯ ಅವರದು.

೧೯೨೩ ಡಿಸೆಂಬರ್ ತಿಂಗಳಲ್ಲಿ ಇವರು ಆರಂಭಿಸಿದ 'ವಸಂತ' ಎಂಬ ಕನ್ನಡ ಪತ್ರಿಕೆಯು ಒಬ್ಬ ಪ್ರತಿಭಾನ್ವಿತ ಲೇಖಕ, ವಿಮರ್ಶಕ, ವಿಚಾರವಾದಿ, ಹೋರಾಟಗಾರ ಸಾಹಿತಿಯನ್ನು ಸೃಷ್ಟಿಸಿತೆಂಬುದಾಗಿ ಹೇಳಬಹುದು. ಅವರ "ರಾಷ್ಟ್ರಗೀತೆ ಸುಧಾರಕ" ಮತ್ತು "ನೀಳ್ಗವನಗಳು" ಎಂಬುವು ಕವನ ಸಂಕಲನಗಳಾಗಿದ್ದು ಮುಂದೆ ಅವರ ಸೃಜನಶೀಲತೆ, ಗದ್ಯದ ಕಡೆ ತಿರುಗಿ, ೧೯೨೫ರಲ್ಲಿ ಪುಟ್ಟ ಕಾದಂಬರಿ "ನಿರ್ಭಾಗ್ಯ ಜನ್ಮ" ರಚಿಸಿದರು. ಅದು ಅವರ ಸಾಮಾಜಿಕ ಕಳಕಳಿಯ ಪ್ರತಿಬಿಂಬವಾಗಿ ಗದ್ಯಶೈಲಿಗೆ ಹೊಸ ಆಯಾಮವನ್ನು ನೀಡಿದೆ ಎಂದು ಹೇಳಬಹುದು. ಸಾಮಾನ್ಯ ವ್ಯಕ್ತಿಗಳ ಸುತ್ತ ಹೆಣೆಯಲಾಗಿರುವ ಇವರ ಬಹುತೇಕ ಕಾದಂಬರಿಗಳು ನಿತ್ಯ ಜೀವನದ ಸರಳ ಬದುಕಿನ ಒಳಿತು ಕೆಡಕುಗಳನ್ನು ಯಾವ ಆಡಂಬರವಿಲ್ಲದೆ ವಾಸ್ತವಿಕತೆಯ ನಿಜಸ್ವರೂಪದಂತೆ ಚಿತ್ರಿತವಾಗಿರುವುದರಿಂದ ಇವರ ಕಾದಂಬರಿಗಳು ಓದುಗರ ಮನಸ್ಸಿನ ಮೇಲೆ ಗಾಢ ಪರಿಣಾಮ ಬೀರುವುದರಲ್ಲಿ ಯಶಸ್ವಿಯಾಗಿವೆ. ಇವರ ಸಾಹಿತ್ಯದ ಪ್ರಮುಖ ವಾಹಿನಿಯೇ ಕಾದಂಬರಿ ಕ್ಷೇತ್ರ ಇವರ ಕಾದಂಬರಿಗಳಲ್ಲಿ ಬರುವ ಎಲ್ಲಾ ವ್ಯಕ್ತಿಗಳು ಸಾಮಾನ್ಯರಾಗಿದ್ದು ಮತ್ತು ಇವರು ಸೃಷ್ಟಿಸಿರುವ ಅಸಂಖ್ಯಾತ ಪಾತ್ರಗಳು ಆಸ್ತಿಕರಾಗಿರುವುದನ್ನು ನೋಡಿದರೆ ಅವರ ಅಂತರಂಗದ ಮೂಲೆಯಲ್ಲೆಲ್ಲೋ ಭಗವಂತನ ಅಸ್ಥಿತ್ವದ ಬಗೆಗೆ ಅವರ ಬಾಹ್ಯ ಪ್ರಪಂಚದ ವೈಜ್ಞಾನಿಕ ತಿಳಿವಿಗೆ ಮೀರಿದ ಅರಿವು ಇದ್ದಿರಬೇಕು ಅನಿಸುತ್ತದೆ.

ಮನುಷ್ಯ ಸಂಬಂಧದ ಅತ್ಯಂತ ಸೂಕ್ಷ್ಮವೂ ಸಂಕೀರ್ಣವೋ ಆದ ಅಂತರಂಗದ ಕಂಪನಗಳನ್ನು ಮನೋಜ್ಞವಾಗಿ ಹಿಡಿದಿಡಬಲ್ಲ ಕಾರಂತರ ಸೂಕ್ಷ್ಮಗ್ರಾಹಿತನ ಅಪ್ರತಿಮವಾದದ್ದು ಪ್ರತಿಯೊಬ್ಬ ಮಾನವನ ಅಂತರಂಗವು ಸದಾ ಕಾಲವೂ, ಆಗಿನ ಸಂದರ್ಭ, ಪರಿಸ್ಥಿತಿಗಳಿಗೆ ಅನುಸಾರವಾಗಿ ಮಿಡಿಯುತ್ತಲೇ ಇರುತ್ತದೆ. ಈ ಮಿಡಿತಗಳೇ ಮನುಷ್ಯನ ವ್ಯಕ್ತಿತ್ವ ಹಾಗೂ ಸಂಬಂಧಗಳನ್ನೂ ರೂಪಿಸುವ ತಳಪಾಯ. ಈ ತಳಪಾಯದ ಮೇಲೆಯೇ ಸ್ನೇಹ ವಾತ್ಸಲ್ಯ, ದ್ವೇಷ, ಮತ್ಸರಗಳು ಹುಟ್ಟಿ ವ್ಯಕ್ತಿ ಸಂಬಂಧವನ್ನು ಒಂದು ನಿರ್ದಿಷ್ಟ ಕಂಪನಗಳು ಕಾರಂತರ ಕಾದಂಬರಿಯಲ್ಲಿ ಕಾಣಬಹುದಾಗಿದೆ.

ಒಂದು ಕಾಲದಲ್ಲಿ ಮಹಿಳಾ ಲೇಖಕಿಯರ ಕೊರತೆಯಿಂದಾಗ ಸ್ತ್ರೀಯರ ಸ್ವಭಾವ, ವ್ಯಕ್ತಿತ್ವ ಹಾಗೂ ನಡವಳಿಕೆಗಳನ್ನು ಯಾವ ಪೂರ್ವ ನಿರ್ಧಾರಿತ ಸಂಕಲ್ಪಗಳಿಲ್ಲದೆ ನಿತ್ಯ ಬದುಕಿಗೆ ಹತ್ತಿರವಾಗಿ, ಅತ್ಯಂತ ಸರಳವಾದರೂ ಸುಂದರವಾಗಿ ಚಿತ್ರಿಸಿ ಮಹಿಳಾ ಲೇಖಕಿಯರ ಕೊರತೆಯನ್ನು ನೀಗಿಸಿದ್ದಾರೆ.

ಕಾರಂತರಿಗೆ ವ್ಯಕ್ತಿಗತ ಗುಣಗಳ ಬಗ್ಗೆ ಇದ್ದ ಅನುಭವ, ತಿಳುವಳಿಕೆ, ಹಿಡಿತಗಳಿಂದಾಗಿ ಎಂತಹ ಪಾತ್ರವನ್ನಾದರೂ ನಿರಾಯಸವಾಗಿ ಚಿತ್ರಿಸಲು ಸಮರ್ಥರಾಗಿದರು. ಕಾರಂತರು ಸಾಹಿತಿಯಾಗಿದ್ದಲ್ಲದೆ ಒಬ್ಬ ಶ್ರೇಷ್ಠ ತತ್ವಜ್ಞಾನಿಯು ಆಗಿದ್ದುದರಿಂದಲೇ ಅವರು ಈ ಪರಿಸರ, ಜೀವನ ಮತ್ತು ಮಾನವ ಸಂಬಂಧಗಳ ಸೂಕ್ಷ್ಮತೆಯ ಬಗ್ಗೆ ತಮ್ಮದೇ ದೃಷ್ಟಿಕೋನವನ್ನು ಬೆಳೆಸಿಕೊಂಡು ಅವರ ಕಾದಂಬರಿಗಳಲ್ಲಿ ಬರುವ ಕ್ಲಿಷ್ಟ ಪರಿಸ್ಥಿತಿಗಳನ್ನು ದಾರ್ಶನಿಕ ನೆಲೆಯ, ವಿವೇಚನೆಯಲ್ಲಿ ನಿಭಾಯಿಸಿ, ಬದುಕಿನ ಒಳಿತು ಕೆಡಕುಗಳನ್ನು ಸ್ಥಿತಪ್ರಜ್ಞನಂತೆ ಸಮನ್ವಯ ದೃಷ್ಟಿಯಲ್ಲಿ ಪ್ರಸ್ತುತ ಪಡಿಸಿ, ಅವರ ಕೃತಿಗಳಿಗಿಂತ ಮತ್ತು ವ್ಯಕ್ತಿ ಸಹಜವಾದ ಪ್ರಾಪಂಚಿಕ ವ್ಯಕ್ತಿತ್ವಕ್ಕಿಂತ ಉನ್ನತ ಮಟ್ಟಕ್ಕೆ ಬೆಳೆದು ಕಡಲ ತೀರದ ಭಾರ್ಗವರೆನಿಸಿಕೊಂಡಿದ್ದಾರೆ.

ಕಾರಂತರು ಜಗತ್ತಿನ ಶ್ರೇಷ್ಠ ಸಾಹಿತಿಗಳಲ್ಲಿ ಒಬ್ಬರಾಗಿದ್ದಲ್ಲದೆ ಈ ಶತಮಾನದಲ್ಲಿ ಒಂದು ಸಮುದಾಯದ ಬೌದ್ಧಿಕ ಮತ್ತು ಸಾಂಸ್ಕೃತಿಕ ಬದುಕನ್ನು ರೂಪಿಸುವ ಶಕ್ತಿಯಾಗಿದ್ದರು. ಕಾರಂತರಿಂದ ತಮ್ಮ ಜೀವನದ ದೃಷ್ಟಿಕೋನವನ್ನು ರೂಪಿಸಿಕೊಂಡವರು ಅಸಂಖ್ಯಾತ ಮಂದಿ ಇದ್ದಾರೆ. ಕಾರಂತರ ವಿಚಾರಗಳಿಂದ ಸ್ಫೂರ್ತಿಗೊಂಡು, ಕಾರಂತರನ್ನು ಆದರ್ಶವಾಗಿಟ್ಟುಕೊಂಡು ಸ್ವತಃ ಪ್ರಸಿದ್ಧರಾಗಿರುವ ಕವಿ, ಸಾಹಿತ್ಯ ಹಾಗೂ ಲೇಖಕರು ಹಲವಾರು ಇದ್ದಾರೆ. ಹೀಗೆ ಇವರು ಬರೀ ಸಾಹಿತಿಯಾಗಿದ್ದುದಲ್ಲದೆ ಸಮಾಜದ ಗತಿಯನ್ನು ತಿದ್ದುವ, ರೂಪಿಸುವ ಪ್ರೇರಕ ಶಕ್ತಿಯಾಗಿದ್ದರು. ತಮ್ಮ ಕಾದಂಬರಿಗಳಲ್ಲಿ ಮಾತ್ರವಲ್ಲ ನಿಜ ಜೀವನದಲ್ಲೂ ಇವರು ಅನ್ಯಾಯ, ಮೋಸ, ಎದುರಾದಾಗ ತೀವ್ರವಾಗಿ ಪ್ರತಿಭಟಿಸಿದ್ದಲ್ಲದೆ ನ್ಯಾಯಾಲಯಕ್ಕೂ ಹೋಗಲು ಹಿಂಜರಿಯದ ಪ್ರಜ್ಞಾವಂತ ಪ್ರಜೆಯಾಗಿದ್ದರು.

ಕಾರಂತರ ಹೆಚ್ಚಿನ ಕಾದಂಬರಿಗಳು ಕರ್ನಾಟಕ ಅವರೆಲ್ಲಾ ದಕ್ಷಿಣ ಕನ್ನಡದ ಸಂಸ್ಕೃತಿ, ಜೀವನ ಶೈಲಿ ಹಾಗೂ ಅಲ್ಲಿನ ನೆಲದ ಕಂಪನ್ನು, ಕಸುವನ್ನೂ ಹೀರಿಕೊಂಡು ಅರಳಿದ ಕುಸುಮಗಳು ತಮ್ಮ ಕಾದಂಬರಿಗಳ ಮೂಲಕ ಮತ್ತು ಅವರು ಜೀವಿಸಿದ ಬಗೆಯ ಮೂಲಕ ನಮಗೆಲ್ಲರಿಗೆ ಕಲಿಸಿಕೊಟ್ಟ ದೊಡ್ಡ ಪಾಠವೆಂದರೆ 'ಸ್ವಾವಲಂಬನೆ' ಬದುಕೆ ಸತ್ಯ, ಇಲ್ಲದ ದೇವರನ್ನೋ, ಆಧ್ಯಾತ್ಮಿಕತೆಯನ್ನು ನಂಬಿ ಬದುಕಿನಿಂದ ವಿಮುಖರಾಗುವುದು ಬೇಡ. ಸಮಾಜಕ್ಕೆ ಹೊರೆಯಾಗದೆ, ಬದುಕನ್ನು ಎದುರಿಸಿ ಸ್ವಾವಲಂಬಿಗಳಾಗಬೇಕು. ಅದರಲ್ಲೇ ಬದುಕಿನ ಸಾರ್ಥಕತೆ ಇರುವುದು. ಈ ಅಂಶವನ್ನು ಸ್ವತಃ ಬಾಳಿ ತೋರಿಸಿದ್ದಲ್ಲದೆ ತಮ್ಮ ಅನೇಕ ಕಾದಂಬರಿಗಳಲ್ಲಿಯೂ ಪ್ರತಿಪಾದಿಸಿದ್ದಾರೆ.

ಕೌಟುಂಬಿಕ ಕಾದಂಬರಿಗಳು ವಿಫುಲವಾಗಿ ಬರುತ್ತಿದ್ದ ಕಾಲದಲ್ಲೇ ಕಾರಂತರು ತಮ್ಮ ಕಾದಂಬರಿಗಳನ್ನು ರಚಿಸಿದರು. ಕೌಟುಂಬಿಕ ಕಾದಂಬರಿಗಳೆಂದರೆ ಅವು ಸಾಮಾನ್ಯವಾಗಿ ಒಂದು

ಕುಟುಂಬದ ದೈನಂದಿನ 'ಆಗುಹೋಗು' ಗಳನ್ನು ಕುರಿತಾದ ಕಾದಂಬರಿಗಳು ಅವುಗಳ ವಿಸ್ತಾರವು ಅತಿ ಕಡಿಮೆ. ಕಾರಂತರು ಈ ಮೇರೆಯನ್ನು ದಾಟಿದರು. ಇದಕ್ಕೆ ಮುಖ್ಯವಾದ ಕಾರಣವೆಂದರೆ ಜೀವನವನ್ನು ಕಾಣಬೇಕೆಂಬ ಕುತೂಹಲ ಈ ಕುತೂಹಲವು ಬರುಬರುತ್ತ ಜೀವನದ ಉದ್ದೇಶವೆನೆಂದು ಅರಿಯುವ ಪ್ರಯತ್ನದಲ್ಲಿ ಪರ್ಯಾವಸಾನಗೊಳ್ಳುತ್ತವೆ.

ಅಂತರಂಗದ ಪರೀಕ್ಷೆ ಮತ್ತು ವಿಶ್ಲೇಷಣೆಗೆ ಕೈ ಹಾಕಿದ ಸೃಜನಶೀಲ ಲೇಖಕನಲ್ಲಿ ಅಂತರಂಗಕ್ಕೆ ಪೂರಕವಾದ ಬಾಹ್ಯವನ್ನು ರೂಪಕವನ್ನಾಗಿ ಸೃಜಿಸುವ ಒಂದು ಪ್ರಕ್ರಿಯೆ ಪ್ರಾರಂಭವಾಗಬೇಕಿತ್ತು. ಆದರೆ ಕಾರಂತರಲ್ಲಿ ಅಂತರಂಗದ ಸ್ಪರ್ಶವಾದೊಡನೆ ಬರವಣಿಗೆಯ ಪ್ರಕ್ರಿಯೆ ನಂತರ ಮತ್ತು ನೇರ ನಿರೂಪಣಾ ಮಾರ್ಗದತ್ತಲೇ ವಾಲುತ್ತದೆ. ಕಾರಂತರು ವಿಶಾಲ ಹರಹುವುಳ್ಳ, ಉದ್ದಾಮ ಪಾಂಡಿತ್ಯವುಳ್ಳ, ಬದುಕಿನ ಹಲವಾರು ಮುಖಗಳನ್ನು ಸೆರೆಹಿಡಿದ, ಅಂತರಂಗದ ಅಭಿವ್ಯಕ್ತಿ ಮಾರ್ಗಕ್ಕೂ ಸ್ಪಂದಿಸಿದ ಮಹಾ ಚೇತನ ಕಾರಂತರು. ಬಾಲ ಸಾಹಿತ್ಯದಲ್ಲಿ ಕ್ಷೇತ್ರದಲ್ಲಿ ಸೃಜನಶೀಲ ಮತ್ತು ಸೃಜನೇತರ ವಿಭಾಗಗಳೆರಡರಲ್ಲೂ ಕಾರಂತರು ವಿಫುಲವಾಗಿ ಗ್ರಂಥಗಳನ್ನೂ ರಚಿಸಿದ್ದಾರೆ. ಮಕ್ಕಳಿಗಾಗಿ ಕತೆ ಬರೆದಿದ್ದಾರೆ. ಕಾರಂತರ ಬದುಕು, ಬರಹಗಳಲ್ಲಿನ ವೈಚಾರಿಕ ಪ್ರವೃತ್ತಿಯನ್ನು ಅರಿಯದವರಲ್ಲ. ಅವರು ಯಾವ ವಿಷಯವನ್ನು ಕುರಿತೇ ಬರೆಯಲಿ ಅಥವಾ ಭಾಷಣ ಮಾಡಲಿ, ಆ ವಿಷಯವ ಕುರಿತ ಕೂಲಂಕುಷ ಚರ್ಚೆಯನ್ನು ಬೆಳೆಯಿಸುತ್ತಲೇ ನಮ್ಮ ಬುದ್ಧಿ, ಕಣ್ಣು, ಮನಸ್ಸುಗಳಿಗೆ ಚುರುಕು ಮುಟ್ಟಿಸುತ್ತಾರೆ.

ಕಲಾ ಪ್ರಪಂಚದಲ್ಲಿ ಕಾರಂತರೂ ಶ್ರೇಷ್ಠ ಕಲಾವಿದರೂ ಹೌದು, ಕಾರಂತರ ಮನಸ್ಸು ಸಾಹಿತ್ಯವಾದರೆ, ಅವರ ಹೃದಯ ಕಲೆಯಾಗಿತ್ತನ್ನುವುದರಲ್ಲಿ ಸಂದೇಹವೇ ಇಲ್ಲ. ಕಲೆಯ ಎಲ್ಲಾ ಪ್ರಕಾರಗಳಲ್ಲಿಯೂ ಕಾರಂತರಂತೆ ಲೇಖಕರಾಗಿ, ವಿಮರ್ಶಕರಾಗಿ, ಭಾಷಾಂತರಕಾರಗಾತಿ, ನಟರಾಗಿ, ನಿರ್ದೇಶಕರಾಗಿ, ಸೃಜನಶೀಲ ವಿದ್ವಾಂಸರಾಗಿ ಕೆಲಸ ಮಾಡಿದರು.

ಸಂಗೀತ ಮತ್ತು ನೃತ್ಯಗಳಲ್ಲೂ ಕಾರಂತರು ತಮ್ಮದೇ ಆದ ಪ್ರತಿಭೆಯಿಂದ ಅನೇಕ ಸೃಜನಶೀಲ ಪ್ರಯೋಗಗಳನ್ನು ಮಾಡಿ ಯಶಸ್ವಿಯಾಗಿದ್ದಾರೆ. ಕಾರಂತರು ತಮ್ಮ ಪ್ರತಿಭಾ ಪ್ರಕಾಶನಕ್ಕೆ ಹಲವು ಮುಖಗಳನ್ನು ಬಳಸುತ್ತಿದ್ದುದರಿಂದ, ರೂಪಕವಾಗಿ, ಬ್ಯಾಲೆಯಾಗಿ, ನೃತ್ಯವಾಗಿ, ನಾಟಕವಾಗಿ, ಕಾದಂಬರಿಯಾಗಿಯೂ ಹೊರಹೊಮ್ಮಿದ ಅವರ ಸೃಜನಾತ್ಮಕ ಕೆಲಸಗಳಲ್ಲ ಅವರಲ್ಲಡಗಿದ್ದ ಸಂಗೀತ ಮತ್ತು ನೃತ್ಯಾಶಕ್ತಿಗಳನ್ನು ಗುರುತಿಸಬಹುದು.

ಅವರು ಇನ್ನೊಂದು ಅತಿ ಪ್ರಿಯವಾದ ಕ್ಷೇತ್ರವೆಂದರೆ ಯಕ್ಷಗಾನ. ಅವರು ಇದಕ್ಕೆ ಸಲ್ಲಿಸಿದ ಸೇವೆ ಅಸಾಮಾನ್ಯವಾದುದು. ದಕ್ಷಿಣ, ಉತ್ತರ ಕನ್ನಡ ಜಿಲ್ಲೆಗಳಲ್ಲಿ ಪ್ರಖ್ಯಾತವಾದ ಈ ಕಲೆಯನ್ನು ಅವರು ಅಲ್ಲಿಂದ ಹೊರಗೆ ತಂದು ಇಡೀ ಪ್ರಪಂಚಕ್ಕೆ ಅದರ ಹಿರಿಮೆಯನ್ನು ಎತ್ತಿ ತೋರಿಸಿಕೊಟ್ಟು ತಮ್ಮ ಮಹಾ ಸಾಧನೆಯನ್ನು ಪ್ರಕಟಿಸಿದ್ದಾರೆ. ಅವರು ಯಕ್ಷಗಾನ ಕಲೆಗೆ ಸಲ್ಲಿಸಿದ ಅಮೂಲ್ಯ ಸೇವೆಗಾಗಿ ಸ್ವೀಡನ್ನಿನ La Archives la international, stockhomನವರು ಪಾರಿತೋಷಕವನ್ನು ಕೊಟ್ಟು ಸನ್ಮಾನಿಸಿದರು. ಪರಿಣಾಮವಾಗಿ, ಭಾರತದಲ್ಲೂ ಅದಕ್ಕೆ ವಿಶೇಷ ಮನ್ನಣೆಗಳು ದೊರೆತವು. ಅವರ 'ಯಕ್ಷಗಾನ ಬಯಲಾಟ' ವೆಂಬ ಗ್ರಂಥವು ಸಾಹಿತ್ಯ ದೃಷ್ಠಿಯಿಂದಲೂ, ಕಲಾಸೇವೆಯ ದೃಷ್ಠಿಯಿಂದಲೂ ಅತ್ಯುತ್ತಮ ಕೃತಿ. ಶಿವರಾಮ ಕಾರಂತರ ಎಲ್ಲಾ ಬರವಣಿಗೆಗಳು ನೈಜ ಸೃಜನಾತ್ಮಕ ರಚನೆಗಳಾಗಿದ್ದು ಇವರು ಕೇವಲ ಕಾದಂಬರಿ ಕ್ಷೇತ್ರವಲ್ಲದೆ ನಾಟಕ, ಸಣ್ಣಕತೆ, ಹರಟೆ, ವಿಡಂಬನಾ ಕೃತಿಗಳು, ಬಾಲಸಾಹಿತ್ಯ, ರೂಪಾಂತರಗಳು, ಅನುವಾದಗಳು, ವಿಚಾರ ಸಾಹಿತ್ಯ-ಕೃತಿಗಳು, ವಯಸ್ಕರ ಶಿಕ್ಷಣ ಗ್ರಂಥಗಳು ಪ್ರವಾಸ ಕಥನಗಳು, ಜೀವನ ಚರಿತ್ರೆ, ಆತ್ಮ ಕಥನಗಳು, ಸಂಪಾದಿತ ಕೃತಿಗಳು ಅಲ್ಲದೆ ಆಂಗ್ಲಭಾಷೆಯಲ್ಲಿ ಸಂಶೋಧನಾ ಬರಹಗಳನ್ನು ರಚಿಸಿ ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ೪೦೦ ಕ್ಕೂ ಅಧಿಕ ಕೃತಿಗಳನ್ನು ನೀಡಿರುವುದನ್ನು ಕಾಣಬಹುದು.

ಇವರ ಸೃಜನಶೀಲತ್ವಕ್ಕೆ ಕಳಶವಾಗಿ ಎಂಬಂತೆ ಅವರಿಗೆ ದೊರೆತ ಗೌರವಗಳು ಅಪಾರ ಸಾಹಿತ್ಯ ಕ್ಷೇತ್ರದ ಉನ್ನತ ಗೌರವವಾದ "ಜ್ಞಾನಪೀಠ ಪ್ರಶಸ್ತಿ" ಅವರ "ಮೂಕಜ್ಜಿಯ ಕನಸುಗಳು" ಕಾದಂಬರಿಗೆ ದೊರೆತಿದ್ದು ಕರ್ನಾಟಕ ಹಾಗೂ ಇತರ ರಾಜ್ಯ ವಿಶ್ವವಿದ್ಯಾನಿಲಯಗಳ 'ಗೌರವ ಡಿ. ಲಿಟ್' ಪದವಿ ಯಕ್ಷಗಾನ ಕ್ಷೇತ್ರದ ಸಾಧನೆಗೆ "ಜಾಪಾನೀಸ್ ಡ್ಯಾನ್ಸ್ ಕ್ರಿಟಿಕ್ಸ್ ಸೊಸೈಟಿ ಅವಾರ್ಡ್" 'ಮೈ ಮನಗಳ ಸುಳಿಯಲ್ಲಿ' ಕಾದಂಬರಿಗೆ "ಪಂಪ ಪ್ರಶಸ್ತಿ" ಯಕ್ಷಗಾನ ಬಯಲಾಟಕ್ಕೆ 'ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ' ಮರಳಿ ಮಣ್ಣಿಗೆ ಕಾದಂಬರಿಗೆ 'ದೇವರಾಜ ಬಹದ್ದೂರು ಬಹುಮಾನ', ಇದೇ ರೀತಿ 'ತುಲಸೀ ಸಂಮಾನ' ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡಮಿ ಪ್ರಶಸ್ತಿಗಳು ಇನ್ನೂ ಹಲವು ಗೌರವ ಪ್ರಶಸ್ತಿಗಳು ಇವರನ್ನು ಹುಡುಕಿಕೊಂಡು ಬಂದಿರುವುದನ್ನು ಗಮನಿಸಿದರೆ ಇವರ ಸೃಜನ ಶೀಲತೆಯ ಮಟ್ಟವನ್ನು ತಿಳಿಯಬಹುದಾಗಿದೆ.

ಒಟ್ಟಾರೆಯಾಗಿ ಹೇಳುವುದಾದರೆ ಕಾರಂತರ ಪ್ರತಿಭೆ ಕೇವಲ ಸಾಹಿತ್ಯ ಕ್ಷೇತ್ರದ ಕಾದಂಬರಿಗೆ ಮಾತ್ರ ಸೀಮಿತವಾಗಿರದೆ. ಇತರೆ ಎಲ್ಲಾ ಕ್ಷೇತ್ರಗಳಿಗೂ ವಿಸ್ತರಿಸಿದಲ್ಲದೆ, ಉಪಯುಕ್ತ ಮಹತ್ವ ಕೃತಿ ನಿರ್ಮಾಣಕ್ಕೆ ಕಾರಣವಾಗಿದೆ. ಅಲ್ಲದೆ ಅವರ ಪ್ರತಿಭೆ ಯಕ್ಷಗಾನ ಬಯಲಾಟದ ಕ್ಷೇತ್ರದಲ್ಲೂ ಎಂದು ಮಾಸದಂತೆ ಹಚ್ಚಹಸಿರಾಗಿದ್ದು ಚಲನಚಿತ್ರ ಕ್ಷೇತ್ರದಲ್ಲೂ ಮೈಲಿಗಲ್ಲನ್ನು ಸಾಧಿಸಿದೆ. ಶಿವರಾಮ

ಕಾರಂತರು ಕನ್ನಡ ತಾಯಿಕಂಡ ಎಂದು ಮರೆಯದಂತಹ ಅಪ್ಪಟ ಸೋಪಜ್ಞತೆ ಉಳ್ಳ ಒಬ್ಬ ಸೃಜನಶೀಲ ಲೇಖಕ ಎಂಬುದರಲ್ಲಿ ಎರಡು ಮಾತಿಲ್ಲ.

# ಅಧ್ಯಾಯ - ೪

## ಕುವೆಂಪು ವ್ಯಕ್ತಿ ಮತ್ತು ಸೃಜನಶೀಲತೆ

ಆಧುನಿಕ ಕನ್ನಡ ಸಾಹಿತ್ಯದ ಘಟ್ಟಗಳಲ್ಲಿ ವೇದಿಕೆ ಪ್ರಾಯವಾದ ನವೋದಯ ಪಂಥದಲ್ಲಿ ಗುರುತಿಸಲಾಗಿರುವ ಸೃಜನಾತ್ಮಕವಾದ ಬರಹಗಳ ಹೊಸ ಮಾರ್ಗವನ್ನು ಕನ್ನಡ ಸಾಹಿತ್ಯಕ್ಕೆ ನೀಡಿದ ಕವಿ ವೃಂದ ಅಜರಾಮರವಾದುದು. ಅಂತಹ ವಿವರಣಾತ್ಮಕ ಬರಹದ ಹೊಸ ಆಯಾಮದ ಲೇಖನ ಸಮೂಹವನ್ನು ಕನ್ನಡಕ್ಕೆ ನೀಡಿದ ಕವಿ ಸಮೂಹವೇ ಈ ಪಂಥದಲ್ಲಿ ಕಂಡುಬರುತ್ತದೆ.

ಇಪ್ಪತ್ತನೆಯ ಶತಮಾನದ ಪ್ರಾರಂಭದ ಶತಕಗಳಿಂದಲೂ ಕನ್ನಡ ಶ್ರೀ ಸಾಮಾನ್ಯರನ್ನು ವಿಶ್ವ ಮಾನವ ಚೈತನ್ಯವಾಗಿ ಪರಿವರ್ತಿಸುವ ಮಹಾಕಾಯದಲ್ಲಿ ತೊಡಗಿಕೊಂಡು ದೊಡ್ಡ ಕನಸು ಕಂಡವರು ಕುವೆಂಪುರವರು ಕನ್ನಡಿಗರು ಈ ಶತಮಾನವನ್ನು ಕುವೆಂಪು ಶತಮಾನವೆಂದೆ ಗುರುತಿಸತೊಡಗಿರುವುದು ಅದಕ್ಕೆ ಸಾಕ್ಷಿಯಾಗಿದೆ. ಕರ್ನಾಟಕದ ಇತಿಹಾಸದಲ್ಲಿ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಅಪ್ರತಿಮವಾದ ಸ್ಥಾನವನ್ನು ಪಡೆದುಕೊಂಡು ಕವಿ ಜನಮಾನಸದ ಮನಸ್ಸಿನ ಆರಾಧ್ಯ ದೇವತೆ.

'ಕಾಡಿನ ಕೊಳಲಿದು ಕಾಡ ಕವಿಯೂ ನಾ, ನಾಡಿನ ಜನರೊಲಿದಾಲಿಪುದು' ಎಂಬ ಬಿನ್ನಹದೊಂದಿಗೆ, ಕಳೆದ ಶತಮಾನದ ಮೂರನೆಯ ದಶಕದಲ್ಲಿ ಕನ್ನಡ ನವೋದಯವನ್ನು ಪ್ರವೇಶಸಿದ ಈ ಕಾಡಿನ ಕವಿ ಅನಂತರ ನಾಡಿನ ಕವಿಯಾಗಿ, ಸಾಹಿತ್ಯದ ವಿವಿಧ ಪ್ರಕಾರಗಳನ್ನು ಶ್ರೀಮಂತಗೊಳಿಸುತ್ತ, ಜಾಗತಿಕ ಪ್ರಜ್ಞೆಯ ವಿಸ್ತಾರದಲ್ಲಿ ಕನ್ನಡವನ್ನು ಕನ್ನಡಿಗರನ್ನೂ ಬೆಳಸುತ್ತ ಬಂದ ಸಂಗತಿ ಈಗಾಗಲೇ ಕನ್ನಡ ಸಾಹಿತ್ಯ ಚರಿತ್ರೆಯ ಒಂದು ಭಾಗವಾಗಿದೆ. ಅರ್ಧ ಶತಮಾನಕ್ಕೂ ಮೀರಿದ ಕಾಲಮಾನದಲ್ಲಿ ಸಾಹಿತ್ಯ, ಶಿಕ್ಷಣ, ಸಂಸ್ಕೃತಿಗೆ ಮಹತ್ತರವಾದ ಕೊಡುಗೆಯನ್ನು ಕೊಟ್ಟ ಈ ಮಹಾನ್ ಲೇಖಕನ ಸಾಹಿತ್ಯ ನಿರ್ಮಿತಿಯ ಹರಿವು, ಆಳ ಮತ್ತು ವೈವಿದ್ಯಗಳು ಹಾಗೂ ಉದ್ದಕ್ಕೂ ಅವರು ಕಾಯ್ದುಕೊಂಡು ಬಂದ ಒಂದು ನಿಶ್ಚಿತವಾದ ಎತ್ತರ, ಅವರು ಹುಟ್ಟಿ ಬೆಳೆದು ಬದುಕಿದ ಪರ್ವತಾರಣ್ಯ ಪ್ರಪಂಚದಂತೆ ಪ್ರವೇಶ ಮಾಡಿದವರನ್ನು ದಂಗುಬಡಿಸುತ್ತವೆ. ಅವರ ಸಾಹಿತ್ಯದ ವಿಭಿನ್ನ ನೆಲೆಗಳು, ಅದರ ವೈರುಧ್ಯಗಳು, ಅಸ್ಥಿತ್ವದ ಅನೇಕ ಸ್ಥರಗಳಿಗೆ ಏರುವ – ಇಳಿಯುವ ಅನ್ವೇಷಣಾ ಸಾಮರ್ಥ್ಯ, ವಿವಿಧ ಜ್ಞಾನ ಶಾಖೆಗಳ ಗಾಢವಾದ ತಿಳಿವಿನಿಂದ ಅವರು ಪಡೆದುಕೊಂಡ ಉತ್ಪತ್ತಿ ವಿಶೇಷಗಳು, ಯಾವುದೇ ಸಿದ್ಧ ಸಾಹಿತ್ಯ ವಿಮರ್ಶೆಯ ಮಾನದಂಡಗಳಿಗೆ ಅಳವಡುವುದು ದುಸ್ತರವಾಗಿದೆ. ಅಷ್ಟೆ

ಅಲ್ಲ, ಅವರ ಸಾಹಿತ್ಯ ಸಾಧನೆಗಳಾಚೆಗೂ ನಿಂತು ಅವರು ಕನ್ನಡ ಜನಮನದಲ್ಲಿ ಪಡೆದುಕೊಂಡಿರುವ ಸಾಂಸ್ಕೃತಿಕ ಮಹತ್ವ ವಿಶೇಷ ರೀತಿಯದಾಗಿದೆ.

**ವ್ಯಕ್ತಿ :** ಕನ್ನಡಿಗರ ಹೆಮ್ಮೆಯ ಗರಿ ಕುಪ್ಪಳ್ಳಿ ವೆಂಕಟಪ್ಪ ಪುಟ್ಟಪ್ಪ ಅವರ ಕಾವ್ಯನಾಮ 'ಕುವೆಂಪು' ಡಾ.ಕೆ.ವಿ.ಪುಟ್ಟಪ್ಪ ಎಂಬುದಕ್ಕಿಂತಲೂ ಕುವೆಂಪು ಎಂದೇ ಪ್ರಸಿದ್ಧರಾದ ಖ್ಯಾತ ಕವಿ, ಕನ್ನಡದ ಮಹಾನ್ ಚೈತನ್ಯ ಕುಪ್ಪಳ್ಳಿಯ ವೆಂಕಟಪ್ಪ ಮತ್ತು ಅವರ ಪತ್ನಿ ಸೀತಮ್ಮನವರ ಮಗನಾಗಿ ಕುವೆಂಪುರವರು ಹುಟ್ಟಿದ್ದು ತಾಯಿಯ ತವರಾಗಿದ್ದ ಚಿಕ್ಕಮಗಳೂರು ಜಿಲ್ಲೆಯ ಕೊಪ್ಪ ತಾಲ್ಲೂಕಿನ ಹೀರಿ ಕೂಡಿಗೆಯಲ್ಲಿ 1908 ಡಿಸೆಂಬರ್ 29ರಂದು ಸರ್ಕಾರಿ ಶಾಲೆಗಳು ಅಷ್ಟಾಗಿ ಇಲ್ಲದಿದ್ದ ಈ ದಿನಗಳಲ್ಲಿ ಅನೇಕ ಐಗಳ ನೆರವಿನಿಂದ ಮನೆಯಲ್ಲಿಯೇ ಓಂನಾಮ ಶಿಕ್ಷಣ ಆರಂಭವಾಯಿತು. ಅವರ ಬಾಲ್ಯ ಜೀವನ ಕಳೆದದ್ದು ಮಲೆನಾಡಿನ ತೀರ್ಥಹಳ್ಳಿ ತಾಲ್ಲೂಕಿನಲ್ಲಿ ಕುಪ್ಪಳ್ಳಿಯಲ್ಲಿ.

ಪ್ರಕೃತಿ ಮಾತೆಯ ಪರಿಸರವೇ ಮುಂದೊಮ್ಮೆ ಕುವೆಂಪು ಅವರಲ್ಲಿ ಜೀವ ಚೈತನ್ಯ ಚಿಲುಮೆಯನ್ನು ತುಂಬಿತು ಎಂದು ಹೇಳಿದರೆ ತಪ್ಪಾಗಲಾರದು. ತೀರ್ಥಹಳ್ಳಿಯ ಪುಸ್ತಕ ಭಂಡಾರಕ್ಕೆ ನಿತ್ಯ ಯಾತ್ರಿಯಾಗಿದ್ದ ಅವರು ಈ ಹೊತ್ತಿಗಾಗಲೇ ಜೈಮಿನಿ ಭಾರತವನ್ನು ಮಾತ್ರವಲ್ಲದೆ, ವೆಂಕಟಚಾರ್ಯರು ಬಂಗಾಳಿಯಿಂದ ಭಾಷಾಂತರಿಸಿದ್ದ ಕಾದಂಬರಿಗಳನ್ನು ಓದಿ ಮುಗಿಸಿದ್ದರು. ವ್ಯವಹಾರದಲ್ಲಿ ನಷ್ಟವನ್ನು ಅನುಭವಿಸಿದ ತಂದೆ ವಿಷಮಶೀತ ಜ್ವರದಿಂದ ಸತ್ತಾಗ ಇವರಿಗಿನ್ನು ಹನ್ನೆರಡು ವರ್ಷವಾಗಿತ್ತು. ೧೯೨೦ರಲ್ಲಿ ಲೋಯರ್ ಸೆಕಂಡರಿ ಪರೀಕ್ಷೆಯನ್ನು ಮುಗಿಸಿದ ಕುವೆಂಪು ಮುಂದಿನ ಶಿಕ್ಷಣಕ್ಕಾಗಿ ಮೈಸೂರಿಗೆ ಬಂದು ಹಾರ್ಡ್‌ವಿಕ್ ಶಾಲೆಯನ್ನು ಸೇರಿದರು. ಈ ಶಾಲೆಯ ಪುಸ್ತಕ ಭಂಡಾರವಲ್ಲದೆ, ಸಾರ್ವಜನಿಕ ಪುಸ್ತಕ ಭಂಡಾರವೂ ಅವರ ಜ್ಞಾನ ತಣಿಸಲಾರಂಭಿಸಿತು. ವರ್ಡ್ಸ್‌ವರ್ಥ್, ಶೆಲ್ಲಿ, ಕಾರ್ಲೆಲ್, ಶೇಕ್ಸ್‌ಪಿಯರ್, ಮಿಲ್ಟನ್, ಟಾಲ್‌ಸ್ಟಾಯ್ ಮೊದಲಾದವರೆನ್ನೆಲ್ಲಾ ಪರಿಚಯಿಸಿಕೊಂಡಿದ್ದು ಈ ಅವಧಿಯಲ್ಲೆ.

ಸ್ವಾಮಿ ವಿವೇಕಾನಂದರ ಭಾಷಣಗಳ ಸಂಕಲನದತ್ತ ಅವರು ಆಕರ್ಷಿತರಾದದ್ದು, ರವೀಚಿದ್ರರ ಗೀತಾಂಜಲಿಯ ಸೆಳೆತಕ್ಕೆ ಒಳಗಾದದ್ದು, ಬ್ರೌನಿಂಗ್‌ನ 'ಪೈಡ್ ಪೈಪರ್ ಆಫ್ ಹ್ಯಾಮ್‌ಲಿನ್'ಗೆ ಮಾರು ಹೋದದ್ದು ಇದೇ ಅವಧಿಯಲ್ಲಿ ಸ್ವಾತಂತ್ರ್ಯ ಸಂಗ್ರಾಮದತ್ತ ಆಕರ್ಷಿತರಾಗಿ ವಿದೇಶಿ ವಸ್ತುಗಳಿಗೆ ವಿದಾಯ ಹೇಳಿದ ಅವರು ಅಂದಿನಿಂದಲೇ ಖಾದೀ ವಸ್ತ್ರಧಾರಿಗಳಾದರು, ಮೈಸೂರಿನ ನಿಸರ್ಗ ಸೌಂದರ್ಯದ ತಾಣಗಳು ಅವರ ಮನಸ್ಸನ್ನು ಮೋಹಗೊಳಿಸಿದ್ದು ಅವರ ಕವನಗಳಲ್ಲಿ ಮೂಡಿಬಂದಿದೆ.

೧೯೨೪ರಲ್ಲಿ ಬಿ.ಎ. ಶಿಕ್ಷಣಕ್ಕಾಗಿ ಮಹರಾಜ ಕಾಲೇಜಿಗೆ ಬಂದ ಕುವೆಂಪು ಮನಃಶಾಸ್ತ್ರ ಮತ್ತು ತತ್ವಶಾಸ್ತ್ರಗಳನ್ನು ಐಚ್ಛಿಕ ವಿಷಯಗಳನ್ನಾಗಿ ಆಯ್ದುಕೊಂಡಿದ್ದು ಕೂಡ ಅವರ ಮುಂದಿನ ಸಾಹಿತ್ಯ ಸೃಷ್ಟಿಗೆ ಪೂರಕವೇ ಆಯಿತು. 'ಕಿಶೋರ ಚಂದ್ರವಾಣಿ' ಎಂಬ ಕಾವ್ಯ ನಾಮದಿಂದ ಅವರು 'ಡೈಲಿ ಮೇಲ್' ಎಂಬ ಆಂಗ್ಲ ಪತ್ರಿಕೆಯಲ್ಲಿ ಪ್ರಕಟಿಸಿದ ಬರಹ ಕಾಲೇಜಿನಲ್ಲಿ ಕೋಲಾಹಲವನ್ನುಂಟು ಮಾಡಿದ್ದು ಮಾತ್ರವಲ್ಲದೆ ಬಿ.ಎಂ.ಶ್ರೀಯವರ ನಿಕಟ ಪರಿಚಯಕ್ಕೂ ಕಾರಣವಾಯಿತು. ೧೯೨೪ರಲ್ಲಿ ಬೆಳಗಾವಿಯಲ್ಲಿ ನಡೆದ ಕಾಂಗ್ರೇಸ್ ಅಧಿವೇಶನದಲ್ಲಿ ಗಾಂಧೀಜಿಯವರನ್ನು ಕಣ್ಣಾರೆ ಕಂಡು ಪುಳಕಿತವಾದದ್ದು ಅವರ ಅದೃಷ್ಟವೇ ಆಗಿವೆ. ಎ.ಆರ್. ಕೃಷ್ಣಶಾಸ್ತ್ರಿ ಪ್ರೇರಣೆಯಿಂದ ೧೯೨೭ರಲ್ಲಿ ಆಗತಾನೇ ಆರಂಭಗೊಂಡಿದ್ದ ಕನ್ನಡ ಎಂ.ಎ. ಗೆ ಸೇರುವ ನಿರ್ಧಾರದ ಸಂದರ್ಭವನ್ನು 'ಅಮೃತ ಕ್ಷಣ' ವೆಂದೇ ಅವರು ಬಣ್ಣಿಸಿದ್ದಾರೆ. 'ಹಾಗೆ ಮಾಡದಿದ್ದರೆ ಬಹುಶಃ ನನ್ನ ಕಾವ್ಯ ಕನ್ನಿಕೆ ಬಡಕಲು ಕನ್ನಡದ ಪಂಗುಶೈಲಿಯಲ್ಲಿ ಇಂಗ್ಲೀಷಿನ ಎರವಲು ಸರಕನ್ನು ತಲೆಹೊರೆಯಲ್ಲಿ ಹೊತ್ತು ಮಾರುವ ಬೀದಿಯ ಬೇಹಾರಿಯಾಗಿರುತ್ತಿತೋ ಏನೋ?'[೧] ಎಂದು ಅವರೇ ಹೇಳಿಕೊಂಡಿದ್ದಾರೆ.

೧೯೨೯ರಲ್ಲಿ ಎಂ.ಎ. ಮುಗಿಸಿದ ಕುವೆಂಪು ಅವರು ಆ ವರ್ಷವೇ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಅಭ್ಯಾಸಕರಾಗಿ ವೃತ್ತಿ ಜೀವನ ಪ್ರಾರಂಭಿಸಿದರು. ಆ ವರ್ಷವೇ ಸ್ವಾಮಿ ಸಿದ್ದೇಶ್ವರನಂದರು ಅವರನ್ನು ಕಲ್ಕತ್ತೆಗೆ ಕರೆದೊಯ್ದು ಸ್ವಾಮಿ ಶಿವಾನಂದರಿಂದ 'ಮಂತ್ರದೀಕ್ಷೆ' ಕೊಡಸಿದರು. ಸತತವಾಗಿ ಸಾಹಿತ್ಯ ರಚನೆಗೆ ತೊಡಗಿದ್ದ ಕುವೆಂಪು ಅವರ ಮೊದಲ ಕವನ ಸಂಕಲನ 'ಕೊಳಲು' 1930ರಲ್ಲಿ ಪ್ರಕಟವಾಯಿತು.

೧೯೩೭ರಲ್ಲಿ ಕುವೆಂಪು ಗೃಹಸ್ಥಾಶ್ರಮವನ್ನು ಪ್ರವೇಶಿಸಿದರು. ಸ್ವಾರಸ್ಯದ ಸಂಗತಿಯೆಂದರೆ ಅವರ ಧರ್ಮಪತ್ನಿಯಾಗಿ ಅವರ ಕೈಹಿಡಿದ ಕನ್ಯೆಗೆ ಆಕೆ ಹುಟ್ಟಿದಾಗ ಕುವೆಂಪು ಅವರೇ ಹೇಮಾವತಿ ಎಂದು ನಾಮಕರಣ ಮಾಡಿದರು. ಇದರ ಬಗ್ಗೆ ಕುವೆಂಪು ಅವರೇ 'ಲೀಲಾಮಯೀ ಜಗದಂಬೆ ಮುಂದೆ ಹದಿನಾರು ವರ್ಷಗಳ ಆನಂತರ, ೧೯೩೭ರಲ್ಲಿ ನನಗೆ ಸಹಧರ್ಮಿಣಿಯಾಗಿ ನನ್ನ ಜೀವನವನ್ನು ಪಾವನಗೊಳಿಸಿ ಮಧುಮಯವನ್ನಾಗಿ ಮಾಡಲಿದ್ದ ಆ ತೊಟ್ಟಿಲ ಕೂಸಿಗೆ ನಾನೇ ಹೆಸರಿಡುವಂತೆ ವ್ಯೂಹ ಯೋಜನೆ ವಿಧಿಸಿದ್ದಳು"... ಎಂದು ಹೇಳಿಕೊಂಡಿದ್ದಾರೆ. ಮದುವೆಯ ನಂತರವಷ್ಟೆ ಅವರು ಆಶ್ರಮ ಬಿಟ್ಟು ತಮ್ಮದೇ ಆದ 'ಉದಯ ರವಿ' ಯಲ್ಲಿ ಬಂದು ನೆಲಸಿದ್ದು ಅವರ ಗೃಹಸ್ಥ ಜೀವನದ ಶುದ್ಧ ಪ್ರೇಮದ ಪ್ರತೀಕವಾಗಿಯೇ ಹಲವಾರು ಪ್ರೇಮಗೀತೆಗಳ ರಚನೆಯನ್ನು ಕಾಣಬಹುದು.

೧. ಕುವೆಂಪು, ಪ್ರಭುಶಂಕರ ಬೆಂಗಳೂರು, ವಿ.ವಿ. ಬೆಂಗಳೂರು, ೧೯೮೨; ಪು. ೧೨ ರಲ್ಲಿ ಉದೃತ

೧೯೪೯ರಲ್ಲಿ ಅವರ ಬಾಳಿನ ಮಹತ್ತರ ಸಾಧನೆಯಾದ "ಶ್ರೀ ರಾಮಾಯಣ ದರ್ಶನಂ" ಮಹಾಕಾವ್ಯ ಪ್ರಕಟಗೊಂಡಿತು. ಮುಂದೆ ೧೯೫೬ರಲ್ಲಿ ಮೈಸೂರು ವಿ.ವಿ.ಯ ಕುಲಪತಿಗಳಾಗಿ ನೇಮಕಗೊಂಡರು. ವಿಶ್ವವಿದ್ಯಾನಿಲಯಕ್ಕೆ ಹೊಸದಿಕ್ಕು ದೆಸೆಗಳನ್ನು ತೋರುವ ಮಹತ್ತರವಾದ ಜವಾಬ್ದಾರಿಯೂ ಅವರದಾಗಿತ್ತು. ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ ಕೇಂದ್ರೀಕೃತವಾಗಿದ್ದ ಸ್ನಾತಕೋತ್ತರ ಕೇಂದ್ರವನ್ನು ಈಗಿನ ಮಾನಸಗಂಗೋತ್ರಿ ಪ್ರದೇಶವನ್ನು ಕೊಂಡು ಅಲ್ಲಿ ಸ್ಥಾಪಿಸಿದರು. ಇದು ಸಾಮಾನ್ಯವಾದ ಸಾಧನೆಯಾಗಿರಲಿಲ್ಲ.

ಡಾ॥ ಪ್ರಭುಶಂಕರ ಅವರ ಮಾತಿನಲ್ಲಿ ಹೇಳಬೇಕೆಂದರೆ "ಅಸೂಯೆ, ಸ್ವೇಷ, ಹುಟ್ಟಿನಿಂದ ಬಂದ ದುಷ್ಟಬುದ್ದಿ ಸಣ್ಣತನ ಇವೆಲ್ಲ ವಿಶ್ವವಿದ್ಯಾಲಯದ ವಿರುದ್ಧ ಎಂದರೆ ಕುವೆಂಪುರವರ ವಿರುದ್ಧ ಬೇಕಾದಷ್ಟು ನಡೆಯಿತು. ಆದರೆ ಅದೊಂದನ್ನು ಲಿಕ್ಕಿಸದೆ ತಮ್ಮ ಜನ್ಮ ಸಹಜವಾದ ದೃಡತೆಯಿಂದ, ಹಟದಿಂದ ಶುದ್ಧ ಚೇತನರಾದುದರಿಂದ ಪೂರ್ಣ ನಿರ್ಭಿತಿಯಿಂದ ಕುವೆಂಪು ದೃಢವಾಗಿ ಉಕ್ಕಿನ ಹೆಜ್ಜೆಗಳನ್ನು ಮುಂದಿಟ್ಟು ಈ ಮಹಾಕಾವ್ಯವನ್ನು ಸಾಧಿಸಿದರು."[೧]

೧೯೫೭ರಲ್ಲಿ ಧಾರವಾಡದಲ್ಲಿ ನಡೆದ ೩೯ ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಆಯ್ಕೆಯಾದರು ಈ ಸಂದರ್ಭದಲ್ಲಿ ಕರ್ನಾಟಕದ ಕನ್ನಡಿಗರನ್ನೆಲ್ಲಾ ಅಂಭಿನಂದಿಸುತ್ತಾ ತಮ್ಮ ಅಭಿನಂದನಾ ನುಡಿಯಲ್ಲಿ ಸಂಸ್ಕೃತಿ ಕರ್ನಾಟಕದ ಸ್ವರೂಪದ ಬಗೆಗಿನ ತಮ್ಮ ಅದ್ಬುತವಾದ ಪರಿಕಲ್ಪನೆಯನ್ನೆ ಮುಂದಿರಿಸಿದರು ಅಷ್ಟೆ ಅಲ್ಲದೆ ಇಂದಿಗೂ ಎಂದಿಗೂ ಸಂಗತವಾಗಿರುವ ವಿಚಾರ ಪರತೆ ಮತ್ತು ವೈಜ್ಞಾನಿಕ ದೃಷ್ಟಿಯತ್ತ ಸಾಗಬೇಗಿರುವುದರಿಂದ ಮಹತ್ವವನ್ನು ಸಾರಿ ಹೇಳಿದ್ದಾರೆ. ೧೯೬೦ ರಲ್ಲಿ ಕುಲಪತಿಯ ಹುದ್ದೆಯಿಂದ ನಿವೃತ್ತರಾದ ಕುವೆಂಪು ಅವರಿಗೆ ೧೯೪೪ ರಲ್ಲಿ ಕರ್ನಾಟಕ ಸರ್ಕಾರ 'ರಾಷ್ಟ್ರಪತಿ' ಪ್ರಶಸ್ತಿಯನ್ನು ನೀಡಿತು ಆತ್ಮೀಯವಾಗಿ ನಿರಂಕುಶ ಮತಿಗಳಾಗಿ ಎಂಬುದು ಕುವೆಂಪುರವರು ವಿದ್ಯಾರ್ಥಿಗಳಿಗೆ ನೀಡಿದ ಸಂದೇಶ ಕುವೆಂಪುರವರ ವೈಚಾರಿಕ ದಿಟ್ಟತನಕ್ಕೆ ಸಾಕ್ಷಿಯಾಗಿರುವ ಒಂದು ಪ್ರಸಂಗ ಕರ್ನಾಟಕದ ಏಕೀಕರಣಕ್ಕೆ ಸಂಬಂಧಿಸಿದ ಸಮಾರಂಭದ ಭಾಷಣ, ಏಕೀಕರಣದಿಂದಲ್ಲವೇ ಕರ್ನಾಟಕ ಏಕೆ ಇಡೀ ಭಾರತದ ಕಲ್ಯಾಣ ಸಾಧನೆ ನುಡಿಗಳ ಬಗ್ಗೆ ಹೊಂದಿದ್ದ ಉತ್ಕಟ ಅಭಿಮಾನದ ಸಂಕೇತವಾಗಿದೆ. ಹಲವಾರು ಸಾರಿ ಉನ್ನತ ವ್ಯಕ್ತಿಗಳೆಂದು ಸಮಾಜದಲ್ಲಿ ಗುರುತಿಸಿಕೊಂಡಿರುವ ಶ್ರೀಮಂತ ಸಚಿವರು ಮತ್ತು ಸರ್ಕಾರದ ದಬ್ಬಾಳಿಕೆ ಅಥವಾ ಸ್ವಾರ್ಥತನವನ್ನು ವೀರೋಧಿಸಿರುವುದು ಕುವೆಂಪುರವರ ನಿರ್ಭೀತ, ಸ್ವತಂತ್ರ ವ್ಯಕ್ತಿತ್ವ ಪ್ರತೀಕಗಳಾಗಿ ಉಳಿದು ಕೊಂಡಿದೆ ಕುವೆಂಪುರವರ ಕೌಟುಂಬಿಕ ಜೀವನದ ಸರ್ವಸ್ವವೂ ಪ್ರೇಯಸಿ, ಪತ್ನಿ, ಮನೆ, ಮಾತೆ ಆರಾಧ್ಯ ದೇವತೆ ಎಲ್ಲವೂ ಆಗಿದ್ದ ಶ್ರೀಮತಿ ಹೇಮಾವತಿಯವರು ಸೆಪ್ಟೆಂಬರ್ ೧೫, ೧೯೮೭ ರಂದು

೧. ಕುವೆಂಪು, ಪೂರ್ವೋಕ್ತ, ಪುಟ ೫೬

ತೀರಿಹೋದ ಮೇಲೆ ನನ್ನ ಸೃಷ್ಟಿಶಕ್ತಿ ಸಮಸ್ತವೂ ತಿರೋಹಿತವಾಯಿತು ಎಂದು ಕುವೆಂಪು ಹಾಗಾಗ್ಗೆ ಹೇಳುತ್ತಿದ್ದ ಮಾತು ಕಠೋರ ಸತ್ಯವೇ ಆಗಿದ್ದು ಅವರು ಮಾನಸಿಕವಾಗಿಯೂ ಕುಸಿದಿದ್ದರೂ. ಕೊನೆಯ ದಿನಗಳಲ್ಲಿ ಆರೋಗ್ಯವೂ ಕುಸಿಯುತ್ತಾ ಬಂದಿತ್ತು ಮನೆಯವರ ಆರೈಕೆ, ವೈದ್ಯರ ಉಪಚಾರ, ದಾದಿಯರ ಸೇವೆ, ಇವುಗಳನೆಲ್ಲಾ ಮೀರಿ ೧೦-೧೧-೯೪ಳ ರಂದು ಕನ್ನಡ ಸಾಹಿತ್ಯಕ್ಕೆ ತುಂಬಲಾರದ ನಷ್ಟವಾಗಿ ನಮ್ಮನ್ನಗಲಿದರು ಅನಿರೀಕ್ಷಿತವಲ್ಲದಿದ್ದರೂ ಅವರ ಅಗಲಿಕೆ ಒಂದು ವರ್ಗದವರಿಗೆ, ಮಿತ್ರ ಶಿಷ್ಯ ವರ್ಗದವರಿಗೆ ಮಾತ್ರವಲ್ಲದೇ ಮೈಸೂರಿನ ಇಡೀ ಜನತೆಗೆ, ಅಷ್ಟೆ ಏಕೆ, ಇಡೀ ಕರ್ನಾಟಕಕ್ಕೆ ಬರಿಸಲಾಗದ ದುಃಖವನ್ನು ಉಂಟುಮಾಡಿತು.

**ಸೃಜನಶೀಲತೆ:** ಕುವೆಂಪು ತಮ್ಮ ಸೃಜನಶೀಲ ಪ್ರತಿಭೆಯ ಮೂಲಕ ಸಾಹಿತ್ಯದ ಹಲವು ಪ್ರಕಾರಗಳಲ್ಲಿ ಉಲ್ಲೇಖನೀಯ ಕೃತಿಗಳನ್ನು ನೀಡಿದ ಕಾರಣ ಮತ್ತು ಕರ್ನಾಟಕ ಏಕೀಕರಣಕ್ಕೆ ಒದಗಿಸಿದ ಪ್ರೇರಣೆ, ಕನ್ನಡ ಶಿಕ್ಷಣ ಮಾಧ್ಯಮಗಳ ಪರ ಎತ್ತಿದ ಧ್ವನಿ ವೈಚಾರಿಕತೆ, ದರ್ಶನಗಳ ಕೃತಿಗಳು, ಕಾವ್ಯ ಕಥನಕಾವ್ಯ, ಖಂಡಕಾವ್ಯ, ಮಹಾಕಾವ್ಯ, ಕಾವ್ಯ ಮೀಮಾಂಸೆ, ವಿಮರ್ಶೆ, ಜೀವನ ಚರಿತ್ರೆ, ಆತ್ಮ ಚರಿತ್ರೆ, ನಾಟಕ, ಕಥೆ, ಪ್ರಬಂಧಗಳ ಪ್ರಕಾರಗಳಲ್ಲಿ ಎದ್ದು ಕಾಣುವಂತಿದೆ.

ಇದರೊಂದಿಗೆ ಕುವೆಂಪು ಎರಡು ಮಹಾ ಕಾದಂಬರಿಗಳನ್ನು 'ಕಾನೂರು ಹೆಗ್ಗಡತಿ' ಮತ್ತು 'ಮಲೆಗಳಲ್ಲಿ ಮದುಮಗಳು' ಕೃತಿಗಳನ್ನು ಕನ್ನಡ ಸಾರಸ್ವತ ಜಗತ್ತಿಗೆ ಅರ್ಪಿಸಿದ್ದಾರೆ.

ಕುವೆಂಪು ಅವರ ಸೃಜನಶೀಲತೆಯ ಅಭಿವ್ಯಕ್ತಿ ಪ್ರಕಾರ ಕಾವ್ಯ, ಇವರ ಸಾಹಿತ್ಯ ಕ್ಷೇತ್ರದ ಬೇಸಾಯವೆಲ್ಲ ಆಗಿರುವುದು ಕಾವ್ಯ ಭಾಷೆಯಲ್ಲಿ, ಇವರದು ಕವಿ ಹೃದಯ. ಇವರ ಎಲ್ಲಾ ಗದ್ಯ ಬರವಣಿಗೆಗಳು ಸಹ ಕಾವ್ಯಾತ್ಮಕವಾಗಿಯೇ ಇವೆ.

ಹಲವಾರು ಅಂಶಗಳಲ್ಲಿ ಭಿನ್ನವಾದ ಜೀವನ ದರ್ಶನ ಮತ್ತೆ ಒಬ್ಬ ವ್ಯಕ್ತಿಯಲ್ಲಿ ಮೂಡಿ ಬಂದದ್ದು ಕುವೆಂಪು ಅವರಲ್ಲಿ, ವೈದಿಕ, ವೀರಶೈವ, ಗಾಂಧೀವಾದ, ರಾಮಕೃಷ್ಣ ಪರಮಹಂಸರ ಅನುಭವ ಈ ಧೋರಣೆಗಳಿಂದ ಪ್ರಭಾವಿತವಾದ, ಜೊತೆಗೆ ಪಾಶ್ಚತ್ಯ ತತ್ವಶಾಸ್ತ್ರ, ವೈಜ್ಞಾನಿಕ ದೃಷ್ಟಿ ಇವುಗಳ ಹಿನ್ನಲೆಯಿರುವ, ಆದರೂ ಶುಷ್ಕ ವಿಚಾರದಲ್ಲಿ ಪರ್ಯಾವಸಾನವಾಗದ ಜೀವನದ ಬಗೆಗೆ ವಿಸ್ಮಯವನ್ನು ಉಳಿಸಿಕೊಂಡ ಧೋರಣೆ ಒಂದು ಕಡೆ, ಶೂದ್ರ ವರ್ಗದಲ್ಲಿ ಹುಟ್ಟಿದವರಿಂದಲೇ ಪ್ರಾಪ್ತವಾದ ಆ ಜೀವನದ ಆಳವಾದ ಅನುಭವ, ಆದ್ದರಿಂದಲೇ ಶೂದ್ರ ವೈಶಿಷ್ಟಗಳಾದ ಶಕ್ತಿ, ಭಾವಾವೇಶ ಇತ್ಯಾದಿಗಳಿಂದ ಕೂಡಿದ ಧೋರಣೆ ಇನ್ನೊಂದು ಕಡೆ ಈ ವಿಶಿಷ್ಟ ಅಂಶಗಳಿಂದ ಕೂಡಿದ ಕುವೆಂಪುರವರ ಪ್ರಜ್ಞೆ ಸ್ಪರ್ಧಾತ್ಮಕವಾಗಿ ತೊಡಗಿರುವುದು. ಬೇರೆ ಕೇವಲ ಉತ್ತಮ

ವರ್ಗದಿಂದ ಬಂದ ಲೇಖಕ ತೊಡಗುವ ರೀತಿಯಿಂದ ಭಿನ್ನವಾದದ್ದು ಆದ್ದರಿಂದಲೇ ಕೆಲವು ಸಲ ಪರಸ್ಪರ ತೀರ ವಿರುದ್ಧವಾದ ಧೋರಣೆಗಳನ್ನು ಒಳಗೊಂಡು, ಅವುಗಳನ್ನು ಆ ಜಟಿಲತೆಯೊಂದಿಗೆ ಕುವೆಂಪುಅವರ ಪ್ರಜ್ಞೆ ವ್ಯಕ್ತಗೊಳಿಸುತ್ತದೆ. ಈ ಜಟಿಲತೆಯನ್ನು ಅರ್ಥಮಾಡಿಕೊಳ್ಳಬೇಕಾದರೆ ಅವರ ವೈಚಾರಿಕ ಬರವಣಿಗೆಗಳನ್ನು ಮತ್ತು ಸೃಷ್ಟ್ಯಾತ್ಮಕ ಬರವಣಿಗೆಗಳನ್ನು ಅಂದರೆ ಕಾವ್ಯ ಕಾದಂಬರಿ ಇತ್ಯಾದಿಗಳನ್ನು ಒಟ್ಟಿಗೆ ಗಮನಿಸಬೇಕಾಗುತ್ತದೆ.

ಕುವೆಂಪುರವರು ತಮ್ಮ ಸಾಹಿತ್ಯ ಸೇವೆಯನ್ನು ಪ್ರಾರಂಭಿಸಿದ್ದು, ಅವರ ಎಸ್.ಎಸ್.ಎಲ್.ಸಿ. ವಿದ್ಯಾಭ್ಯಾಸದ ಸಂದರ್ಭದಲ್ಲಿ ಅದರಲ್ಲೂ ಆಂಗ್ಲಭಾಷೆಯಲ್ಲಿ ೧೯೨೨ರಲ್ಲಿ ಹೊರತಂದ 'Beginner's muse' ಎಂಬ ಹದಿನಾರು ಪುಟದ ಪುಸ್ತಕದ ಮೂಲಕ ಇದು ಏಳು ಇಂಗ್ಲೀಷ್ ಕವನಗಳನ್ನು ಒಳಗೊಂಡಿದೆ. ಈ ಕವಿತೆಗಳನ್ನು ಮೆಚ್ಚಿಕೊಂಡ ಡಾ. ಎಂ.ಹೆಚ್. ಕೃಷ್ಣ ಅಯ್ಯಂಗಾರ್‌ರವರ ಸಲಹೆಯ ಮೇರೆಗೆ ಐರಿಷ್ ಕವಿ ಜೇಮ್ಸ್ ಕಸಿನ್ಸ್‌ರವರ ಭೇಟಿ ಮತ್ತು ಕಸಿನ್ಸ್ ಅವರು ಕನ್ನಡದಲ್ಲಿಯೇ ಕಾವ್ಯ ರಚನೆ ಮಾಡು ಎಂಬ ಸಲಹೆ ಮುಂದಿನ ಅವರ ಸಾಹಿತಿಕ ಜೀವನವನ್ನೇ ಬದಲಿಸಿತು.

ಪ್ರಕೃತಿ ಕವಿ ಎಂದೇ ಕರೆಯಲ್ಪಡುವ ಶ್ರೀ ಕುವೆಂಪುರವರ ಕಾವ್ಯ ಸೇವೆ ಅಪಾರವಾದುದು. ಅವರು ೨೮ ಕಿಂತಲೂ ಹೆಚ್ಚು ಕವನ ಸಂಕಲನಗಳನ್ನು ಮತ್ತು ಖಂಡ ಕಾವ್ಯಗಳನ್ನು, ಒಂದು ಮಹಾಕಾವ್ಯವನ್ನು ರಚಿಸಿದ್ದು, ಇವರ ಸರಳ ರಗಳೆಯಲ್ಲಿ ರಚಿತವಾದ "ಶ್ರೀ ರಾಮಾಯಣ ದರ್ಶನಂ" ಮಹಾಕಾವ್ಯವು ಕನ್ನಡಕ್ಕೆ ಪ್ರಥಮ ಜ್ಞಾನಪೀಠ ಪ್ರಶಸ್ತಿಯನ್ನು ೧೯೬೮ರಲ್ಲಿ ಮತ್ತು ಪಂಪ ಪ್ರಶಸ್ತಿಯನ್ನು ೧೯೮೮ರಲ್ಲಿ ತಂದುಕೊಟ್ಟಿತು. ಇವರ ಕವನಗಳನ್ನು ಪ್ರಕೃತಿ ಗೀತೆಗಳು, ದಾಂಪತ್ಯಗೀತೆಗಳು, ಕಥನ ಕಾವ್ಯಗಳು, ಶಿಶು ಗೀತೆಗಳು, ವಿಡಂಬನ ಗೀತೆಗಳು, ಮತ್ತು ಸಂಕೀರ್ಣ ಗೀತೆಗಳೆಂದು ವಿಭಾಗಿಸಿ ಅಧ್ಯಯನಕ್ಕೆ ಒಳಪಡಿಸಿರುವುದನ್ನು ವಿಮರ್ಶಾ ಪರಂಪರೆಯಲ್ಲಿ ಗುರುತಿಸಬಹುದಾಗಿದೆ. ಇವರ ರಚನೆಗಳಲ್ಲಿ ಭಾವಗೀತಾತ್ಮಕ ಲಯವೇ ಮುಖ್ಯವಾಗಿದ್ದು ಹಲವಾರು ಗೀತೆಗಳು ಪ್ರಸಿದ್ಧ ಭಾವಗೀತೆಗಳಾಗಿವೆ. ಅವರ ಚಿತ್ರಂಗದಾ ಖಂಡಕಾವ್ಯವು ಮಹೋಪಮೆಗಳಿಂದಲೂ, ಉದಾತ್ತ ಶೈಲಿಯಿಂದಲೂ, ಗಂಭೀರವಾದ ಭಾಷಿಕ ಸ್ವರೂಪದಿಂದಲೂ ಕಂಗೊಳಿಸುತ್ತಿದ್ದು, ಗಾತ್ರದಲ್ಲಿ ಸಣ್ಣದಾಗಿದ್ದರೂ ಗುಣದಲ್ಲಿ ಬೃಹತ್ತಾಗಿರುವ ಮಹತ್ವಪೂರ್ಣ ಕೃತಿಯಾಗಿದೆ.

ನಾಟಕಕಾರರಾಗಿಯೂ ಪ್ರಸಿದ್ಧಿಗೆ ಬಂದ ಕುವೆಂಪು ಶೈಲಿ ಕಾವ್ಯಾತ್ಮಕವಾಗಿಯೇ ಇದ್ದು ಅವರು ಮಕ್ಕಳ ನಾಟಕಗಳೂ ಸೇರಿದಂತೆ ೧೪ ನಾಟಕಗಳನ್ನು ನೀಡಿದ್ದಾರೆ. ನಾಟಕಗಳಿಗೆ ಆಧಾರ

ಮಹಾಭಾರತ, ರಾಮಾಯಣ, ಇತಿಹಾಸ, ಪುರಾಣಗಳೇ ಆದರೂ ತಮ್ಮದೇ ಆದ ಪೂರ್ಣದೃಷ್ಟಿ, ಸರ್ವೋದಯ, ಸಮನ್ವಯಗಳನ್ನು ಮಿಳಿತಗೊಳಿಸಿ, ಸಮಾಜದ ಸಮಕಾಲೀನ ಶೋಷಣೆ, ಡಂಭಾಚಾರ, ಮೂಢನಂಬಿಕೆಗಳನ್ನು ವಿಡಂಬಿಸಿದ್ದಾರೆ. ಮತ್ತು ವಿರೋಧಿಸಿದ್ದಾರೆ. ಇವರ ನಾಟಕಗಳ ಸಾಲಿನಲ್ಲಿ ಕೆಲವು ಪಾಶ್ಚತ್ಯ ಸಾಹಿತ್ಯದ ಅನುವಾದಿತ ನಾಟಕಗಳಿದ್ದರೂ ನಮ್ಮ ಪರಿಸರಕ್ಕೆ ಒಗ್ಗುವಂತೆ ರೂಪಾಂತರಿಸಿದ್ದಾರೆ. ಆದರೂ ಮೂಲದ ಆಧಾರದ ಮೇಲೆ ರಚಿತವಾಗಿರುವ ಎಲ್ಲಾ ನಾಟಕಗಳು, ವಸ್ತು ಮೂಲವಾದ್ದಾದರೂ ಅದರ ರಚನೆ ಕುವೆಂಪುಅವರ ಪ್ರತಿಭೆಯ ಅಭಿವ್ಯಕ್ತಿಯೇ ಆಗಿದೆ. 'ಸರಳ ರಗಳೆ' ಯನ್ನು ನಾಟಕದಲ್ಲಿ ಪ್ರಯೋಗ ಮಾಡಿದರವರಲ್ಲಿ ಬಹುಶಃ ಕುವೆಂಪು ಅವರು ಮೊದಲಿಗರು. ಈ ಪ್ರಯೋಗದ ಸಿದ್ಧಿಯನ್ನು 'ಬೆರಳ್‌ಗೆ ಕೊರಳ್' ನಾಟಕದಲ್ಲಿ ಕಾಣುತ್ತೇವೆ. ಈ ಪ್ರಯೋಗ ಹೊಸಗನ್ನಡದ ಸಂಬಂಧವನ್ನು ಕಳೆದುಕೊಳ್ಳದೆ ಅದರ ಹಳಗನ್ನಡದ ಸಹಚರ್ಯವನ್ನುಳ್ಳ ಇಲ್ಲಿನ ಭಾಷೆ, ಏಕಲವ್ಯನ ಕಥೆಗೆ ಬೇಕಾದ ದೂರವನ್ನು ಸಾಧಿಸಿ, ನಮಗೆ ಹತ್ತಿರವಾದುದ್ದಾಗಿಯೂ ಉಳಿಯುತ್ತದೆ. ಇದು ನಾಟಕದಲ್ಲಿ ಸರಳ ರಗಳೆಯ ಪ್ರಯೋಗದ ದೃಷ್ಟಿಯಿಂದ ವಿಶಿಷ್ಟವಾದ ಸಾಧನೆ.

ಗದ್ಯ ಸಾಹಿತ್ಯದ ಕ್ಷೇತ್ರದಲ್ಲಿ ಪ್ರಮುಖ ಪ್ರಕಾರವಾದ ಸಣ್ಣಕಥಾ ಪ್ರಕಾರದಲ್ಲೂ ಕುವೆಂಪುರವರು ತಮ್ಮ ಸೃಜನಶೀಲತೆ ಮೆರೆದಿದ್ದು ಸನ್ಯಾಸಿ ಮತ್ತು ಇತರ ಕಥೆಗಳು, ದೇವರು ಮತ್ತು ಇತರ ಕಥೆಗಳನ್ನು ರಚಿಸಿದ್ದಾರೆ. ಇವರ ಕಥೆಗಳ ಸಂಖ್ಯೆ ಹೆಚ್ಚಿಲ್ಲವಾಗಿದ್ದರೂ ವೈವಿಧ್ಯ ಮತ್ತು ಕಲಾತ್ಮಕತೆಯ ದೃಷ್ಟಿಯಿಂದ ಅವು ವಿಶೇಷವಾಗಿ ಗಮನಾರ್ಹವಾಗಿದೆ. ಇವುಗಳಲ್ಲಿ ಸಾಮಾಜಿಕ ಸಮಸ್ಯೆಗಳ ಅನಾವರಣವಿದೆ. ಕ್ರೌರ್ಯದ ಕರುಣಾಜನಕ ಚಿತ್ರವಿದೆ. ವಿಡಂಬನೆ ಇದೆ, ವಿಶ್ಲೇಷಣೆ ಇದೆ. ದಟ್ಟ ಜೀವನಾಮಭವನ ನಿರೂಪಣೆ ಇದೆ. ತ್ಯಾಗ–ಬಲಿದಾನಗಳ ಚಿತ್ರಣವಿದೆ. ವಿಚಾರ–ಪ್ರಚೋದನೆ ಇದೆ.

'ಕಾನೂರು ಹೆಗ್ಗಡತಿ' ಮತ್ತು ಕುವೆಂಪು ಅವರ ಎರಡು ಕಾದಂಬರಿಗಳು. ಅವರು ಇನ್ನೇನನ್ನು ಬರೆಯದೇ ಇನ್ನೊಂದು ಗ್ರಂಥವನ್ನು ರಚಿಸಿದ್ದರು. ಕನ್ನಡ ಸಾಹಿತ್ಯ ಲೋಕದಲ್ಲಿ ಅವರ ಕೀರ್ತಿ ಚಿರಸ್ಮರಣೀಯವಾಗಲು ಸಾಕಾಗುತ್ತಿದ್ದಿತು"[೧] ಎಂದುಕೊಳ್ಳುವ ವೇಳೆಗೆ "ಕನ್ನಡ ಸಾಹಿತ್ಯದಲ್ಲಿ ಮಹತ್ವಪೂರ್ಣ ಘಟನೆ, ಒಂದು ಅಪೂರ್ವಸಿದ್ದಿ"[೨] ಎಂಬಂತೆ ಇನ್ನೊಂದು ಮಹಾಕಾದಂಬರಿಯನ್ನು ನೀಡಿ ಕುವೆಂಪು ಕನ್ನಡ ಸಾಹಿತ್ಯ ಲೋಕವನ್ನು ಅಚ್ಚರಿಗೊಳಿಸಿದ್ದಾರೆ.

ಈ ಎರಡು ಕಾದಂಬರಿಗಳನ್ನು ನೋಡಿದ್ದರೆ, ಮಲೆನಾಡ ಬದುಕಿನ ಯಾವೊಂದು ಮುಖವೂ ಇಲ್ಲಿ ಅನಾವರಣಗೊಳ್ಳದೆ ಹೋಗಿಲ್ಲ ಎಂಬ ಅನುಭವ ಓದುಗರಿಗೆ ಉಂಟಾಗುತ್ತದೆ. ಪರಸ್ಪರ ಪೂರಕವಾಗಿರುವ ಈ ಎರಡು ಕಾದಂಬರಿಗಳಲ್ಲಿ ಹಾಗೂ ಮಲೆನಾಡಿನ ಚಿತ್ರಗಳು ಕೃತಿಯಲ್ಲಿ ವಾಸ್ತವವಾಗಿ ಮಲೆನಾಡಿನ "ವಿಶ್ವರೂಪ" ದ ದರ್ಶನವೇ ಆಗುತ್ತದೆ.

೧. ಗಂಗೋತ್ರಿಯಲ್ಲಿ ಎಂ. ರಾಮರಾವ್, ಪು. ೬೮೫.
೨. ಗಂಗೋತ್ರಿಯಲ್ಲಿ ಶ್ರೀ ಕೃಷ್ಣ ಆಲನಹಳ್ಳಿ ಪು. ೧೮೧೩

ಇದಲ್ಲದೆ ಇವರ ಸಾಹಿತ್ಯಕ್ಕೆ ವಿಮರ್ಶೆಯ ಬರವಣಿಗೆಯೂ ವಿಶಿಷ್ಟವಾದದ್ದಾಗಿದೆ. ತಾವು ಮೆಚ್ಚಿಕೊಂಡ ಕವಿಗಳ ಬಗೆಗೆ ಅವರು ರಸ ವಿಮರ್ಶೆ ಬರೆದಿದ್ದಾರೆ. ಇವರ ವಿಮರ್ಶೆ ಬಗ್ಗೆ ದಾಮೋದರರಾವ್‌ರವರ ಮಾತು ಅರ್ಥಪೂರ್ಣವಾಗಿದೆ. "ಎರಡು ವಿಮರ್ಶಾ ಪರಂಪರೆಗಳ ತೌಲನಿಕ ವಿಶ್ಲೇಷಣೆಯ ಮೂಲಕ ತನ್ನದೇ ಆದ ಮಾರ್ಗವನ್ನು ರೂಪಿಸಬೇಕೆನ್ನುವ ಒಂದು ಸೃಜನ ಚೇತನದ ಸಂಕಲ್ಪ ಬಲ, ಉದ್ದೇಶ, ಸ್ಪಷ್ಟನೆ ಕುವೆಂಪು ವಿಮರ್ಶೆಯ ವಿಶಿಷ್ಟತೆಯಾಗಿದೆ."

ಇವರ ಸಾಹಿತ್ಯ ಸೇವೆಗೆ ಸಂದ ಗೌರವಗಳು ಅಪಾರ. ಸಾಹಿತ್ಯದ ಮೇರು ಸ್ಥಾನವಾದ ರಾಷ್ಟ್ರಕವಿ ಗೌರವ (೧೯೬೪) ದಿಂದ ಇಡಿದು ಭಾರತೀಯ ಜ್ಞಾನಪೀಠ ಪ್ರಶಸ್ತಿ (೧೯೬೮), ಪಂಪ ಪ್ರಶಸ್ತಿ (೧೯೮೮), ಕರ್ನಾಟಕ ರತ್ನ ಪ್ರಶಸ್ತಿ (೧೯೯೨), ಭಾರತ ಸರ್ಕಾರದಿಂದ ಪದ್ಮಭೂಷಣ ಪ್ರಶಸ್ತಿ (೧೯೫೮), ಮೈಸೂರು, ಕರ್ನಾಟಕ, ಬೆಂಗಳೂರು, ಕಾನ್ಪುರ ವಿಶ್ವದಿದ್ಯಾನಿಲಯಗಳು. ಗೌರವ ಡಿ.ಲಿಟ್ ಪ್ರಶಸ್ತಿಗಳು, ಕೇಂದ್ರ ಸಾಹಿತ್ಯ ಅಕಾಡೆಮಿ, ಸ್ಯಾನ್ ಪ್ರಾನ್ಸಿಸ್ಕೋ ವತಿಯಿಂದ ಗೌರವ ಡಾಕ್ಟರೇಟ್ ಪ್ರಶಸ್ತಿ (೧೯೮೯) ಗಳು ಬಂದು ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿವೆ.

ಕುವೆಂಪು ಅವರ ಹಿನ್ನೆಲೆಯನ್ನು ಕುರಿತು ಆಲೋಚಿಸುವಾಗ ಹೊಳೆಯುವ ಸಂಗತಿಯೆಂದರೆ ಅವರು ಆಧುನಿಕ ಕನ್ನಡದ ಮೊಟ್ಟಮೊದಲ ಪ್ರಮುಖ ಅ-ಬ್ರಾಹ್ಮಣ ಸಾಹಿತಿಯೆನ್ನುವುದು. ಸಾಂಸ್ಕೃತಿಕ ಸಾಧನೆಯು ಆರ್ಥಿಕ ಸಾಧನೆಯು ಆರ್ಥಿಕ ಸ್ಥಿತಿ-ಗತಿಗಳ ಮೇಲೆ ಮಾತ್ರ ಅವಲಂಬಿಸಿದ್ದ ಆ ಕಾಲದಲ್ಲಿ, ಶೂದ್ರನಾಗಿ ಹುಟ್ಟುವುದೆಂದರೆ ಸಾಹಿತ್ಯ ಸೃಷ್ಟಿಯ ಪ್ರಧಾನ ಪ್ರವಾಹದಿಂದ ದೂರ ಉಳಿಯುವುದೇ ಆಗಿತ್ತು. ತೇಜಸ್ವಿಯವರು ಹೇಳುವಂತೆ "ಕುವೆಂಪು ಕನ್ನಡ ಸಾಹಿತ್ಯದಲ್ಲಿ ಪ್ರಮುಖ ಎನ್ನಿಸಿಕೊಂಡ ಮೊದಲ ಶೂದ್ರ. ಭಾರತೀಯ ಸಂಪ್ರದಾಯ ಆವರಣದಲ್ಲಿ ಶೂದ್ರನಿಗೆ ಅಕ್ಷರಜ್ಞಾನದ ಅಧಿಕಾರವೂ ಇರಲಿಲ್ಲ, ಗ್ರಂಥಾಧ್ಯಯನದ ಅಧಿಕಾರವೂ ಇರಲಿಲ್ಲ. ಅಂಥ ಸನ್ನಿವೇಶದಲ್ಲಿ ಶೂದ್ರನಿಗೆ ಬರೆಯುವುದೇ ಪ್ರತಿಭಟನೆ. ಅದೇ ಸಂಪ್ರದಾಯ ಮತ್ತು ಪರಂಪರೆಯ ವಿರುದ್ಧ ಮೊದಲ ಕ್ರಾಂತಿಕಹಳೆ"[೧]

೧ ಪೂರ್ಣ ಚಂದ್ರ ತೇಜಸ್ವಿ ೧೯೮೦ 'ಶ್ರೀ' ಕುವೆಂಪು; ಪುಟ ೨

# ಅಧ್ಯಾಯ –೫

## ಕಾರಂತರ ಕಾದಂಬರಿಗಳಲ್ಲಿ ದಲಿತ ಪ್ರಜ್ಞೆ

ಸಮಾಜಕ್ಕೆ ಅಪ್ರಿಯವಾದ ಸತ್ಯಗಳನ್ನು ಹೇಳಿ ಚುಚ್ಚಿ ತೋರಿಸುವ ವ್ಯಕ್ತಿಯು ಸಮಾಜದಲ್ಲಿ ಯಾವಾಗಲೂ ನಿಷ್ಠುರಕ್ಕೆ ಗುರಿಯಾಗಬೇಕಾಗುತ್ತದೆ. ಸಮಾಜದಲ್ಲಿ ತಾನು ಕೆರಳಿದ ಉದ್ದೇಶಕ್ಕೆ, ಉದ್ದೇಶದ ಪ್ರಕ್ರಿಯೆಗೆ ಧೈರ್ಯದಿಂದ ಎದೆಯೊಡ್ಡಿ ನಿಂತು ಜನ ಮೆಚ್ಚಲಿ, ಮೆಚ್ಚದಿರಲಿ ತಾನು ಕಂಡ ಸತ್ಯವನ್ನು ಸಮಾಜದ ಹಿತಕ್ಕಾಗಿ ಹೇಳಲೇಬೇಕಾಗುತ್ತದೆ ಎಂದು ಸಾಧಿಸುವವರೆಷ್ಟು ಮಂದಿ?

ವ್ಯಷ್ಟಿ–ಸಮಷ್ಟಿಯ ಬದುಕಿನಲ್ಲಿ, ಬದುಕಿನ ಬಗೆಬಗೆಯ ಸಂಪರ್ಕ ಸಂದರ್ಭಗಳಲ್ಲಿ ಉಂಟಾದ ಹಿತ–ಅಹಿತ ಪ್ರಭಾವಗಳನ್ನು ಮೇಳವಿಸಿ, ಸಮಗ್ರ ದೃಷ್ಟಿಯಿಂದ ನೋಡಿದಾಗ, ಮಾನವನ ಬಾಳಿನಲ್ಲಿ ಉಳಿಯುವುದು ಏನು? ಇದನ್ನು ಹುಡುಕುವ ಪ್ರಯತ್ನವನ್ನು ನಿರಂತರವಾಗಿ ನಡೆಸಿದವರು ಕಾರಂತರು.

ಕಾದಂಬರಿ ಮನಸ್ಸಿಗೆ ಸನಿಹವೆನಿಸುವ ವಿಚಾರಧಾರೆಯನ್ನು ಒಳಗೊಂಡಾಗ, ಅಂದರೆ ನಮಗೆ ತೀರ ಸಮೀಪವಾದಾಗ ಪ್ರಿಯವಾಗುತ್ತದೆ. ಕಾರಂತರ ಕಾದಂಬರಿಗಳು ಇಂತಹುವೇ ಆಗಿವೆ. ಇದಕ್ಕೆ ಕಾರಣ ಅವರ ಆಳವಾದ ಅನುಭವ ಮತ್ತು ಅವರೇ ತಮಗಿರುವುದಾಗಿ ಹೇಳಿಕೊಂಡಿರುವ ಸಹಾನುಭೂತಿ, ಮೇಲಾಗಿ ವೈಚಾರಿಕತೆಗೂ ಅವರು ಮಹತ್ವ ಕೊಡುವುದರಿಂದ ಅನೇಕರಿಗೆ ಹಿಡಿಸುವ ವ್ಯಕ್ತಿಯಾಗಿದ್ದಾರೆ. ತಮ್ಮ ಅನಿಸಿಕೆಗಳನ್ನು ಹಿಂದುಮುಂದು ನೋಡದೆ ಅಭಿವ್ಯಕ್ತಿಗೊಳಿಸುವ ಯಾವುದನ್ನೂ ನಿರ್ಭೀತವಾಗಿ ಹೇಳುವ ಅವರ ಗುಣ ಮೆಚ್ಚುವಂತಹದು.

ಕನ್ನಡ ಕಾದಂಬರಿ ಲೋಕಕ್ಕೆ ಡಾ. ಶಿವರಾಮಕಾರಂತರ ಕೃತಿಗಳು ಅಪೂರ್ವವಾದ ಉಡುಗೊರೆಗಳು. ಕಾರಂತರ ವ್ಯಕ್ತಿತ್ವ, ಅವರ ಅನುಭವಗಳು ಇದ್ದುದನ್ನು ಇದ್ದ ಹಾಗೆಯೇ ಹೇಳುವ ಅವರ ನೇರವಾದ ರೀತಿ ಮತ್ತು ಧೀಮಂತಿಕೆ, ಅವರ ಪ್ರಾಮಾಣಿಕತೆ – ಇವೆಲ್ಲವೂ ಅವರ ಕೃತಿಗಳಲ್ಲಿ ಎದ್ದುಬಂದಿವೆ. ಅವರ ಕೃತಿಗಳಲ್ಲಿ ಪಾಶ್ಚಾತ್ಯರ ಪ್ರಸಿದ್ಧ ಕಾದಂಬರಿಕಾರರಲ್ಲಿ, ಉದಾ: ಡಿಕನ್ಸ್, ಟಾಲ್‌ಸ್ಟಾಯ್, ಹಾರ್ಡಿ, ಕಾಮು, ಹೆಸ್ಸ್ ಮುಂತಾದವರು, ಕಾಣುವ ಆಳ ಹಾಗೂ ವಿಸ್ತಾರವಾದ 'ಗ್ಲೋಬಲ್' ಅನುಭವಗಳು ಕಂಡುಬರುತ್ತವೆ. ಕಾರಂತರು ತಮ್ಮ ಕಾದಂಬರಿಗಳಲ್ಲಿ ಬರುವ ಪಾತ್ರಗಳಲ್ಲಿ ತಮ್ಮ ಪರಿಪಕ್ವವಾದ ಅನುಭವಗಳನ್ನು ಸುಲಭ ರೀತಿಯಲ್ಲಿ, ಪ್ರಾದೇಶಿಕ ಸನ್ನಿವೇಶಗಳನ್ನು ಸೃಷ್ಟಿಸಿ 'ಸಾರ್ವತ್ರಿಕ ಸತ್ಯ'ವನ್ನು ಸಾರುತ್ತಾರೆ. ಅಲ್ಲದೆ ಅವರು ಸೃಷ್ಟಿಸಿದ ಮುಖ್ಯಪಾತ್ರಗಳು, ಮಾತಿನ ಕಡೆ ಹೆಚ್ಚಿನ ಪ್ರಾಮುಖ್ಯತೆ ಕೊಡದೆ, ತಾವು ಅನುಭವಿಸುತ್ತಿರುವ ಸನ್ನಿವೇಶಗಳು ಮೂಲತಃ ಒಳಗೇ ಅದುಮಿ ಇಟ್ಟಿರುವ ಭಾವನೆಗಳನ್ನು ಓದುಗರಿಗೆ ಬಿಚ್ಚುಮನಸ್ಸಿನಿಂದ ಕನ್ನಡಿ ಹಿಡಿದಂತೆ ತೋರಿಸುತ್ತಾರೆ.

ಕಾರಂತರ 'ಕುಡಿಯರ ಕೂಸು' ಮತ್ತು 'ಚೋಮನದುಡಿ', ಅಲ್ಲಿನ ಪಾತ್ರಗಳ ಒಳತೋಟಿಯ ಮನಃಶಾಸ್ತ್ರೀಯ ವಿವರಗಳು ಕಂಡುಬಂದು ಕಾರಂತರು ಹೊಂದಿರುವ ದಲಿತರ ಬಗೆಗಿನ ಕಾಳಜಿ ಮತ್ತು ಅವರ ಜೀವನದ ಆಳವಾದ ಅಧ್ಯಯನದ ಪ್ರತಿಬಿಂಬವಾಗಿ ಈ ಎರಡೂ ಕಲಾಕೃತಿಗಳ ಸೃಷ್ಟಿಯಾಗಿರುವುದನ್ನು ಕಾಣಬಹುದಾಗಿದ್ದು ಇವುಗಳ ಆಧಾರ ಮತ್ತು ವಿವರಣಾತ್ಮಕ ಅಧ್ಯಯನದಿಂದ ಕಾರಂತರು ಹೊಂದಿರುವ ದಲಿತಪ್ರಜ್ಞೆಯನ್ನು ಮುಂದೆ ಗುರುತಿಸಲು ಪ್ರಯತ್ನಿಸಲಾಗಿದೆ.

**ಕುಡಿಯರ ಕೂಸು:**

'ಕುಡಿಯರ ಕೂಸು' ಕಾದಂಬರಿಯಲ್ಲಿ ಕಾರಂತರು ನಿಸರ್ಗದ ಮಕ್ಕಳಾದ ಕುಡಿಯರ ಜೀವನದ ಸ್ಥೂಲ ರೂಪರೇಷೆಗಳನ್ನು ಚಿತ್ರಿಸಿದ್ದಾರೆ. ಈ ಕಾದಂಬರಿ ಕಾರಂತರ ಇತರ ಕಾದಂಬರಿಗಳಿಗಿಂತ ತೀರಾ ಭಿನ್ನವಾದುದು. ಓದುತ್ತಾ ಹೋದಹಾಗೆ ಇದು ಕಾದಂಬರಿಗಿಂತಲೂ ಮಾನವಶಾಸ್ತ್ರದ 'Monograph' ಅನ್ನು ಹೆಚ್ಚಾಗಿ ಹೋಲುತ್ತದೆ. 'Monograph'ನಲ್ಲಿ ಎರಡು ವಿಧಾನಗಳಿವೆ. ಮಾನವಶಾಸ್ತ್ರದ ಪ್ರಕಾರ ಕಾರಂತರು ಪ್ರಾತಿನಿಧಿಕ ವಿಧಾನವನ್ನು ಅನುಸರಿಸಿ ಕುಡಿಯರ ಪ್ರಪಂಚದ ಅಂಚಿನಲ್ಲಿ ನಿಂತು ಅವಲೋಕಿಸಿ, ಆ ಪ್ರಪಂಚದ ಆಗುಹೋಗುಗಳನ್ನು ವರ್ಣಿಸಿದ್ದಾರೆ. ತಾವು ಅವಲೋಕಿಸಿದ ಕುಡಿಯರ ಒಂದೋ ಎರಡೋ ಸಮುದಾಯಗಳ ಆಧಾರದ ಮೇಲೆ ಕುಡಿಯರ ಪ್ರಪಂಚದ ಎಲ್ಲಾ ಸಮುದಾಯಗಳಿಗೆ ಅನ್ವಯಿಸುವಂತೆ ಅವುಗಳ ರಚನೆ, ಅವರ ಸಂಸ್ಕೃತಿಯ ಅಂಶಗಳ ನಂಬಿಕೆಗಳು ಮತ್ತು ಅವಕ್ಕೆ ಅನುಗುಣವಾದ ಪೂಜೆ-ಪುನಸ್ಕಾರಗಳು, ನಡವಳಿಕೆಗಳು, ಹಬ್ಬ-ಹರಿದಿನಗಳು ಮತ್ತು ಕುಟುಂಬ ಜೀವನದ ಸಂಕೀರ್ಣ ಸಮಸ್ಯೆಗಳು ಮುಂತಾದುವುಗಳ ಬಗ್ಗೆ ಎಲ್ಲಾ ಕುಡಿಯರಿಗೆ ಅನ್ವಯಿಸುವಂತೆ ತಮ್ಮ ತಾತ್ವಿಕ ನಿರ್ಧಾರಗಳನ್ನು ಮಂಡಿಸಿದ್ದಾರೆ. ಈ ಕೃತಿಯ ವಿಶಿಷ್ಟತೆ ಎಂದರೆ ಇದು ಪೂರ್ಣ ಕಾದಂಬರಿಯೂ ಅಲ್ಲ, ಪೂರ್ಣ Monograph ಅನ್ನುವಂತೆಯೂ ಇಲ್ಲ. ಈ ಕೃತಿ ಎರಡು ಸಾಹಿತ್ಯ ಮಾದರಿಗಳ ಲಕ್ಷಣಗಳನ್ನು ಹೊಂದಿರುವ ಕನ್ನಡದಲ್ಲಿ ಅಪರೂಪವಾದ ಕೃತಿ ಎನ್ನಬಹುದು.

ಈ ಕಾದಂಬರಿಯಲ್ಲಿ ಚಿತ್ರಿತವಾಗಿರುವುದು ನಾಯಕ-ನಾಯಕಿಯರ ಸುತ್ತ ಹೆಣೆದಿರುವ ಕತೆಯಲ್ಲ. ಅದಕ್ಕೆ ಬದಲು ಅವು ಒಂದು ಬುಡಕಟ್ಟಿನ ಜೀವನದ ಸಮಷ್ಟಿ ನೋಟವಾಗಿದೆ. ನಿಸರ್ಗದೊಡನೆ ಹಾಸುಹೊಕ್ಕಾಗಿರುವ ಕುಡಿಯರ ನಿತ್ಯಜೀವನದ ರೀತಿ-ನೀತಿ, ನಿಯಮಗಳು, ನಂಬಿಕೆಗಳು, ಕಟ್ಟು-ಕಟ್ಟಳೆಗಳು ಮತ್ತು ಅವರ ಜೀವನದಲ್ಲಿ ಜರುಗುತ್ತಿರುವ ಬದಲಾವಣೆಗಳು ಕಾದಂಬರಿಗೆ ಗ್ರಾಸವಾಗಿದೆ.

‘ಕುಡಿಯರ ಕೂಸು’ ಕಾದಂಬರಿ ಕಥಾಜಗತ್ತಿನ ಒಂದು ವಿಶಿಷ್ಟವಾದ ಘಟ್ಟವನ್ನು ಸೂಚಿಸುತ್ತದೆ. ‘ನಿಸರ್ಗದ ಮಕ್ಕಳಾದ ಮಲೆಕುಡಿಯರನ್ನು’ ಕುರಿತು ಬರೆದ ಕಾದಂಬರಿ ಇದಾಗಿದೆ. ಮುನ್ನುಡಿಯಲ್ಲಿಯೇ ಕಾರಂತರು ಹೀಗೆ ಹೇಳುತ್ತಾರೆ: “ಇದು ದಕ್ಷಿಣ ಕನ್ನಡದ ಜೀವಚಿತ್ರಗಳಲ್ಲಿ ಒಂದಾದರೂ ಉಳಿದ ಜನಜೀವನ ಚಿತ್ರಗಳಿಗಿಂತ ಇದು ಬೇರೆಯಾದುದು ಎಂಬುದರಿಂದ ಇದಕ್ಕೆ ಬೇರೆಯೇ ಸ್ಥಾನವಿದೆ” ಎಂದಿರುವುದನ್ನು ಗಮನಿಸಿದರೆ ಈ ಕಾದಂಬರಿಯಲ್ಲಿ ಚಿತ್ರಿತವಾದ ಜೀವನವು ಮಲೆಯ ಹೊರಗಿನ ಸಮಾಜಕ್ಕೆ ಹೊರತಾದದ್ದು ಎಂಬ ಭಾವನೆ ಕಾದಂಬರಿಕಾರರಲ್ಲಿ ಇದೆ. ಈ ಭಾವನೆಯೇ ಈ ಕಾದಂಬರಿಯ ಶಿಲ್ಪವನ್ನು ಕೂಡ ರೂಪಿಸಿದೆ. ಕುಡಿಯರು ನಿಸರ್ಗದ ಮಡಿಲಲ್ಲೇ ಬೆಳೆಯುವ ಒಂದು ಬುಡಕಟ್ಟು ಜನಾಂಗದವರು. ಒಬ್ಬನು ಬಿಟ್ಟ ಹೆಂಡತಿಯನ್ನು ಇನ್ನೊಬ್ಬರು ಯಾವುದೇ ಸಂಕೋಚವಿಲ್ಲದೆ ಮತ್ತು ಒಬ್ಬ ಗಂಡಸು ಎಷ್ಟು ಸಲವಾದರೂ ಮದುವೆಯಾಗುವ ಅವಕಾಶಗಳು ಈ ಜನಾಂಗದವರಿಗೆ ಇದೆ ಎಂಬುದು ಕಾದಂಬರಿಯಲ್ಲಿ ಚಿತ್ರಿತವಾಗಿದೆ. ಇಲ್ಲಿ ಚಿತ್ರಿತವಾಗಿರುವ ಜೀವನಕ್ಕೂ ಕಥಾಹಂದರಕ್ಕೂ ಅವಿನಾಭಾವ ಸಂಬಂಧವಿರುವುದನ್ನು ಈ ಕಾದಂಬರಿಯುದ್ದಕ್ಕೂ ಗುರುತಿಸಬಹುದು.

‘ಕುಡಿಯರ ಕೂಸು’ ಕಾದಂಬರಿ ಪಾತ್ರ ರಚನೆಯ ಬಗ್ಗೆ ಹೇಳುವುದಾದರೆ, ಕಾರಂತರು ತಮ್ಮ ‘ಮೂಕಜ್ಜಿಯ ಕನಸುಗಳು’ ಕಾದಂಬರಿಯ ಮುನ್ನುಡಿಯಲ್ಲಿ ಹೇಳಿರುವಂತೆ – ಈ ಕಾದಂಬರಿಗೆ ಕಥಾನಾಯಕನಿಲ್ಲ; ನಾಯಕಿಯಿಲ್ಲ; ಎಂಬುದು ‘ಕುಡಿಯರ ಕೂಸು’ ಕಾದಂಬರಿಗೂ ಸ್ವಲ್ಪಮಟ್ಟಿಗೆ ಅನ್ವಯಿಸುತ್ತದೆ. ಕೆಲವು ಪಾತ್ರಗಳು ಹೆಚ್ಚಾಗಿ ಓದುಗರ ಗಮನಕ್ಕೆ ಬಿಡುವಂತೆ ಚಿತ್ರಣಗೊಂಡಿದ್ದರೂ ಯಾವ ಒಂದು ಗಂಡಸಿಗೆ ನಾಯಕ ಅಥವಾ ಹೆಂಗಸಿಗೆ ನಾಯಕಿ ಎಂದು ಖಚಿತವಾಗಿ ನಿರ್ದಿಷ್ಟವಾಗಿ ಹೇಳಲಾಗುವುದಿಲ್ಲ. ಈ ಕಾದಂಬರಿಯಲ್ಲಿ ನಮಗೆ ಕಾಣುವುದು ಸಮಾನ ಗಾತ್ರದ ಪಾತ್ರಗಳು.

ಕಾರಂತರು ಬುಡಕಟ್ಟಿಗೆ ಸೇರಿದ ಸಂಸ್ಕೃತಿಯ ಜೀವನಕ್ರಮಗಳನ್ನು ಎರಡೂ ಕಾದಂಬರಿಗಳಲ್ಲಿ ಬರೆದರು. ಕನ್ನಡ ಕಾದಂಬರಿಯ ಇತಿಹಾಸ ಮತ್ತು ಬೆಳವಣಿಗೆಯನ್ನು ತುಂಬಾ ಸೂಕ್ಷ್ಮವಾಗಿ ಗಮನಿಸಿದರೆ ಇದು ವಿಶೇಷವೆಂದು ಅನಿಸುತ್ತದೆ. ಕುಡಿಯರ ಕೂಸು ಕಾದಂಬರಿಯನ್ನು ಬರೆಯಲು ಉಂಟಾದ ಕಾರಣಗಳನ್ನು ಸ್ವತಃ ಶಿವರಾಮ ಕಾರಂತರು ಒಂದೆರಡು ಕಡೆಗಳಲ್ಲಿ ಪ್ರಸ್ತಾಪಿಸಿದ್ದಾರೆ. “ಪಾಶ್ಚಾತ್ಯರಲ್ಲಿ ಇನ್ನೊಬ್ಬರ ಬಗ್ಗೆ ಕಾದಂಬರಿ ಬರೀಬೇಕು ಅಂತ ಅಲ್ಲಿಗೇ ಹೋಗಿ ಇರ್ತಾರೆ. ನಾನು ಹಾಗೆ ಮಾಡಿದ್ದು ಕಡಿಮೆ. ಕುಡಿಯರ ಕೂಸು ಬಂದು ಹುಡುಕಿಕೊಂಡು ಹೋದದ್ದು, ನನ್ನ ಮೈಮೇಲೆ ಬಿದ್ದ ವಸ್ತುವನ್ನು ಅಥವಾ ಸನ್ನಿವೇಶವನ್ನು ತಕ್ಕೊಂಡು ಬರೀತೇನೆ. ಅದು ಇಲ್ಲದಿದ್ದರೆ ಬರೀಲಿಕ್ಕೆ ವಸ್ತು ಇಲ್ಲ” ಎಂದು ಶಿವರಾಮ ಕಾರಂತರು ಹೇಳಿಕೊಂಡಿದ್ದಾರೆ (ಸಂವಾದ ೪, ೧೯೮೮).

ಮಾನವೀಯತೆ ಮತ್ತು ಉದಾರತೆಗಳು ಕನ್ನಡ ನವೋದಯ ಲೇಖಕರ ಜೀವನಾಡಿಗಳು. ಕಾರಂತರ ಬಹುತೇಕ ಕಾದಂಬರಿಗಳನ್ನು ಗಮನಿಸಿದರೆ ಒಂದು ಉದ್ದೇಶವು ಸ್ಪಷ್ಟವಾಗುತ್ತದೆ. ಕಾರಂತರ ಬಹುತೇಕ ಕಾದಂಬರಿಗಳಲ್ಲಿ ಮುಗ್ಧಜೀವಿಗಳ ಬಗ್ಗೆ ಅನುಕಂಪವಿದೆ. ಅದನ್ನು ಕಾರಂತರು ಸಹಜವಾಗಿಯೇ ಒಪ್ಪಿರುತ್ತಾರೆ. ಕಾರಂತರ ಕಾದಂಬರಿಗಳಲ್ಲಿ ಬರುವ ಆದರ್ಶ, ಮಾನವೀಯ ಒಳ್ಳೆಯ ಮೌಲ್ಯಗಳ ಹುಡುಕಾಟವಾಗಿರುತ್ತದೆ. ಅದು ಶ್ರದ್ಧೆಯಿಂದ, ಮುಗ್ಧತೆಯಿಂದ ನಿಸರ್ಗದ ಜೊತೆಯಲ್ಲಿ ಸಹಬಾಳ್ವೆಯಿಂದ ಹುಟ್ಟುತ್ತದೆ. ಕಾರಂತರು ಅದನ್ನು ತುಂಬ ಪ್ರೀತಿಯಿಂದ ಬರೆಯುತ್ತಾರೆ. ಕಾರಂತರಿಗೆ ಮನುಷ್ಯಧರ್ಮ, ಮನುಷ್ಯರ ನಂಬಿಕೆಗಳು ಮುಖ್ಯ. ಮನುಷ್ಯನ ಕೇಡಿನ ಸ್ವಭಾವವನ್ನು ಅವು ಟೀಕಿಸುವುದು ಕೂಡಾ ಅಷ್ಟೇ ನಿಜ.

ಈ ಕಾದಂಬರಿಯಲ್ಲಿ ಬರುವ ಪಾತ್ರಗಳು ಕೆಂಚ, ಕರಿಯ, ತುಕ್ರ, ಬೂದ, ತಿಮ್ಮ, ತಿರುಮಲಭಟ್ಟರು, ಸ್ತ್ರೀಯರಲ್ಲಿ ಮುಖ್ಯರಾದವರೆಂದರೆ ಕೆಂಪಿ ಮತ್ತು ಗಿಡ್ಡಿ, ಕುಡಿಯರ ಕೂಸಾದ ಕರಿಯ ಅಜ್ಜ ಸತ್ತ ಮೇಲೆ ಕಿರಿಯನಾದರೂ ದೆವ್ವದ ಹೇಳಿಕೆಯ ಬಲದಿಂದ ಗುರಿಕಾರನಾಗಿ ಬೂದ ಮತ್ತು ಕೆಂಪಿಯರ ಗುಡಿಸಿಲಲ್ಲಿ ಬೆಳೆಯುತ್ತಾನೆ. ನಿಸರ್ಗಪ್ರೇಮಿಯಾದ, ಸಾಹಸಿಯಾದ ಕರಿಯ ಮಲೆಯ ದುರ್ಗಮಸ್ಥಾನಗಳನ್ನು ಒಂದೂ ಬಿಡದೆ, ಕಾಳನನ್ನು ಕಟ್ಟಿಕೊಂಡು, ಹುಡುಕಿ ಒಳಹೊಕ್ಕು, ಅವಲೋಕಿಸಿ, ಪರೀಕ್ಷಿಸಿ ತನ್ನ ಪರಿಸರದ ನಿಕಟ ಪರಿಚಯ ಮಾಡಿಕೊಳ್ಳುತ್ತಾನೆ. ಅಂದರೆ ದೆವ್ವದ ಮಾತಿನ ಬಗ್ಗೆ ಆ ಜನಾಂಗದ ನಂಬಿಕೆ ಕೇವಲ ಮೂಢನಂಬಿಕೆಯಾಗಿ ಕಂಡುಬಾರದೆ ಆ ಜನಾಂಗದ ಒಳಿತಿಗೆ ಕಾರಣವಾಗುವ ಬಗೆಯಲ್ಲಿ ನಿಸರ್ಗ ಎಂಬುದೇ ದೇವರು ಎಂದು ಸಾಬೀತಾಗುವುದು ಕಂಡುಬರುತ್ತದೆ. ಹಿರಿಯರಿಗೆ ಮೀಸಲಾದ ಗುರಿಕಾರನ ಸ್ಥಾನ ಕಿರಿಯನಾದ ಕರಿಯನಿಗೆ ಸಲ್ಲುವುದೇ ಅಲ್ಲದೆ ಇಲ್ಲಿನ ಕೆಂಚ ತನ್ನ ಜನಾಂಗದ ಒಗ್ಗಟ್ಟಿನ ಮತ್ತು ಅವರು ಅದರ ಬಗ್ಗೆ ಹೊಂದಿರುವ ಆತ್ಮಪೂರ್ವಕ ಕಾಳಜಿಯನ್ನು ಪ್ರತಿಬಿಂಬಿಸುತ್ತದೆ.

ಸಮಾಜದಲ್ಲಿ ಕಂಡುಬರುವ ಎಲ್ಲಾ ಪ್ರಕಾರದ ಪಾತ್ರಗಳ ಮಾದರಿಗಳನ್ನು ಇಲ್ಲಿ ಈ ಜನಾಂಗದ ಚೌಕಟ್ಟಿನಲ್ಲಿ ಕಾರಂತರು ಗುರುತಿಸಿರುವುದನ್ನು ನಾವು ಕಾಣಬಹುದು. ಹೆಚ್ಚು ವಿವರಕ್ಕೆ ಪಾತ್ರವಾಗದ ಬೂದ ಕಂಡುಬಂದರೂ ಕೆಂಪಿಯನ್ನು ಪ್ರೀತಿಸುತ್ತಿದ್ದ ಭಗ್ನಪ್ರೇಮಿಯಾದರೂ ಮುಂದೆ ಕೆಂಪಿಯು ತುಕ್ರನನ್ನು ಮದುವೆಯಾಗಿ ಮತ್ತೆ ತವರಿಗೆ ಮರಳಿದಾಗ ಅವಳ ಮನವೊಲಿಸಿ ಮದುವೆಯಾಗುವುದು ಅವನ ಅದಮ್ಯ ಪ್ರೇಮದ ಆಳವನ್ನು ಸಮರ್ಥಿಸುತ್ತದೆ.

ಇನ್ನು ಇಲ್ಲಿ ಕಂಡುಬರುವ ಕಿರಿಮಲೆ ಮತ್ತು ಹಿರಿಮಲೆಯ ಸುಂದರಿಯರೆಂದರೆ ಕೆಂಪಿ ಮತ್ತು ಗಿಡ್ಡಿ. ಇದರಲ್ಲಿ ಕೆಂಪಿ ತುಕ್ರನನ್ನು ಬಿಟ್ಟು ಬೂದನನ್ನು ವಿವಾಹವಾದರೆ ಹಿರಿಮಲೆಯ ಚೋಮನ

ಮಗಳು ಗಿಡ್ಡಿ ಕ್ರೈಸ್ತ ಮತದ ಬ್ರಗಾಂಟನ ಪ್ರಭಾವಕ್ಕೆ ಒಳಗಾಗಿ ಅವನ ಪ್ರಣಯಕ್ಕೆ ತುತ್ತಾಗಿ ಜಾತಿಭ್ರಷ್ಟಳಾಗುತ್ತಾಳೆ. ಇಂತಹವಳನ್ನು ಮದುವೆಯಾಗಲು ಕುಡಿಯರ ಗಂಡುಗಳು ನಿರಾಕರಿಸಿದಾಗ ಅಲ್ಲಿನ ತಿಮ್ಮ ಅವಳನ್ನು ಮದುವೆಯಾಗಿ ತನ್ನ ಪ್ರಾಣಕ್ಕಿಂತಲೂ ಹೆಚ್ಚಾಗಿ ಪ್ರೀತಿಸುತ್ತಾನೆ.

"ನಿಸರ್ಗದ ಮಕ್ಕಳಾದ ಈ ಪಾತ್ರಗಳ ಮುಖ್ಯಲಕ್ಷಣವೆಂದರೆ ಸರಳತೆ. ಕಾರಂತರ ಪಾತ್ರ ರಚನೆಯ ಬಗ್ಗೆ ಡಾ.ಯು.ಆರ್.ಅನಂತಮೂರ್ತಿಯವರು ಬೇರೊಂದು ಸಂದರ್ಭದಲ್ಲಿ ಹೇಳಿದ ಮಾತು ಈ ಪ್ರಸ್ತುತ ಕಾದಂಬರಿಗೂ ಅನ್ವಯಿಸುತ್ತದೆ" ......... ಈ ಮಾತುಗಳು ತಾವು ಕಂಡುಂಡ ಜೀವನಕ್ಕೆ ಬದ್ಧವಾಗಿದ್ದು ಪಡೆದಷ್ಟನ್ನೇ ಚಿಂತಿಸುತ್ತಾರೆಂದು ಕಾರಂತರ ಬರವಣಿಗೆಯ ದೊಡ್ಡ ಗುಣ ... ಸ್ವಯಂಪೂರ್ಣವೆನ್ನಿಸುವ ಈ ಪ್ರಪಂಚಕ್ಕೆ ತಲೆಬಾಗಿ ಕಾರಂತರ ಪಾತ್ರಗಳು ಬದುಕುತ್ತಿರಬಹುದು. ಬಂದಿರುವ ಬದುಕನ್ನು ಜೀವಿಸದ ಹೊರತು ಬೇರೆ ದಿಕ್ಕಿಲ್ಲವೆಂಬ ಪಾತ್ರಗಳು ಅದೃಷ್ಟವನ್ನು ಕೆಣಕದೇ ಇರಬಹುದು".[೧]

ಮಲೆಗಳಲ್ಲಿ ಮುಂಗಾರು ಮಳೆಯ ವೈಖರಿಯನ್ನು ಕಾರಂತರು ಹೀಗೆ ವರ್ಣಿಸಿದ್ದಾರೆ: "ಬಿತ್ತನೆಗೆ ಸಮನಾಗಿ ಮುಂಗಾರುಮಳೆ ಬಡಿಯಿತು. ನಾಲ್ಕಾರು ದಿನಗಳ ಕಾಲ ಹಿಂದಣ ಪರ್ವತ ಶಿಖರಗಳನ್ನಾಗಲೀ, ಎದುರಿನ ಬೆಟ್ಟದ ಸಾಲುಗಳನ್ನಾಗಲೀ, ಕೆಳಗಿನ ಕಣಿವೆಗಳನ್ನಾಗಲೀ ಒಬ್ಬರೂ ನೋಡಿರಲಿಕ್ಕಿಲ್ಲ. ದಟ್ಟಣಿಸಿದ ಕಾರ್ಮುಗಿಲುಗಳೇ ಮುಗಿಲುಗಳು! ಕೊನೆಮೊದಲಿಲ್ಲದ ಬಿರುಗಾಳಿ ಮುಗಿಲುಗಳ ರಾಶಿಗಳನ್ನು ಅಬ್ಬರದಿಂದ ಬೀಸಿ ತಂದು, ಬೆಟ್ಟ, ಬಂಡೆ, ಕಾಡುಗಳ ಮೇಲೆ ಕವಿಯಿಸುತ್ತಿತ್ತು. ಏನು ಗಾಳಿಯ ಸುಯ್ಲು! ಮರಗಳನ್ನು ತೂಗಿಸಿದ್ದೇ ತೂಗಿಸಿದ್ದು! ಬಿದಿರಮೆಳೆಗಳನ್ನು ಚೀರಾಡಿಸಿದ್ದೇ ಚೀರಾಡಿಸಿದ್ದು! ...... [೨] ಎಂದು ಆ ಮಳೆಯ ಆರ್ಭಟವನ್ನು, ವೈಭವ ಮತ್ತು ರಮಣೀಯತೆಯನ್ನು ವರ್ಣಿಸಿದ್ದಾರೆ.

ಈ ಕಾದಂಬರಿಯಲ್ಲಿ ಓದುಗರು ಗಮನಿಸಬೇಕಾದ ಮುಖ್ಯವಾದ ಅಂಶವೆಂದರೆ ಮಲೆಕುಡಿಯರು ಅನೇಕ ತಲೆಮಾರುಗಳ ಹಿಂದೆ 'ಗವಿಮಾನವ'ರಾಗಿದ್ದರು. ಅವರು ಪ್ರಾಚೀನ ಪದ್ಧತಿ ಅನುಸರಿಸಲು ಕಾಡು ಕಡಿದು ಬೆಂಕಿಯಾಗಿ ಉಳಿದ ಬೂದಿಯನ್ನು ಮಣ್ಣಿನೊಡನೆ ಬೆರೆಸಿ ವ್ಯವಸಾಯವನ್ನು ಮಾಡುತ್ತಿದ್ದರು. ಅಲ್ಲದೇ ಇವರ ಆಹಾರದ ಹೆಚ್ಚು ಪಾಲು ಬೇಟೆ, ಮೀನುಗಾರಿಕೆ, ಗೆಡ್ಡೆಗೆಣಸುಗಳಿಂದ ಪೂರೈಕೆಯಾಗುತ್ತಿತ್ತು. ಇವರ ರೀತಿನೀತಿಗಳು ಸಮಾಜದಲ್ಲಿ ಕಡೆಗಣನೆಗೆ ಗುರಿಯಾಗಿರುವ ದಲಿತ ಎಂದು ಕರೆಸಿಕೊಳ್ಳುವಂತಹ ಜನರ ಜೀವನಕ್ಕೆ ಸಮೀಪವಾಗಿದ್ದು ಮುಂದೆ ನಾಗರೀಕ ಸಮಾಜದ ಸಂಪರ್ಕದಿಂದ, ಮತಾಂತರದಿಂದ ಬದಲಾವಣೆ ಆಗಿರುವುದನ್ನು ಈ ಕಾದಂಬರಿಯಲ್ಲಿ ಕಾರಂತರು ತುಂಬಾ ಸೃಜನಶೈಲಿಯ ವಿವರಣಾತ್ಮಕ ಚಿತ್ರಣದ ಮೂಲಕ ನೀಡಿದ್ದಾರೆ.

೧. ಋಜುವಾತು, ಜನವರಿ-ಮಾರ್ಚ್ ೧೯೮೪, ಪುಟ ೯೯

೨. ಕುಡಿಯರ ಕೂಸು, ಪುಟ ೭೦

ಕುಡಿಯರ ನಂಬಿಕೆಗಳು, ನೇಮ, ನಿಯಮಗಳು, ಕೋಲ ಮಾಡುವುದು ಇವುಗಳ ಸ್ಥೂಲಪರಿಚಯ ಮಾಡಿಕೊಡುವುದರಲ್ಲಿ ಈ ಕಾದಂಬರಿ ಯಶಸ್ವಿಯಾಗಿದೆ ಎಂದೇ ಹೇಳಬಹುದು. ಆದರೂ ಇವರ ಜೀವನದ ಆಳ-ಅಗಲಗಳನ್ನು ಅಳವಡಿಸಿಕೊಂಡು ದಟ್ಟವಾಗಿ, ಪರಿಣಾಮಕಾರಿಯಾಗಿ ಚಿತ್ರಿಸುವುದರಲ್ಲಿ ಬ್ರಾಹ್ಮಣ ಸಮಾಜದಿಂದ ಬಂದ ಕಾರಂತರು, ಅನುಭವ ಪಡೆದ ಅಭಿವ್ಯಕ್ತಿಯಂತೆ ಚಿತ್ರಿಸಿಲ್ಲದಿದ್ದರೂ ಒಂದು ಸಮಗ್ರ ಚಿತ್ರಣ ಕೊಡುವುದರಲ್ಲಿ, ಸೃಜನಶೀಲ ಕೃತಿಯ ನಿರ್ಮಾಣದಲ್ಲಿ ಸಫಲವಾಗಿದ್ದಾರೆಂದೇ ಊಹಿಸಬಹುದು. ಇನ್ನು ಕುಡಿಯರ ಜೀವನದ ದಟ್ಟವಾದ ನಿರೂಪಣೆ ಮಾಡಲು ಆಳವಾದ ಅಭ್ಯಾಸದ ಅಗತ್ಯವಿದೆ. ಈ ಕಾದಂಬರಿಯ ಮತ್ತೊಂದು ಕೊರತೆ ಎಂದೇ ಹೇಳುವ ವಿಷಯವೆಂದರೆ ಕಾರಂತರ ಇತರ ಕಾದಂಬರಿಗಳಂತೆ ಪರಿಣಾಮಕಾರಿಯಾಗಿ ಓದಿಸಿಕೊಂಡು ಹೋಗದಿರುವುದು. ಕಾರಂತರು ಸ್ವತಃ ಕುಡಿಯರ ಜೀವನದ ಕೂಲಂಕುಷ ಮತ್ತು ಆಳವಾದ ಅಧ್ಯಯನದಿಂದ ಕಾದಂಬರಿಯನ್ನು ರಚಿಸಿರುವುದಾಗಿ ಹೇಳಿರುವುದನ್ನು (ಮುನ್ನುಡಿಯಲ್ಲಿ) ನೋಡಿದರೆ ಇನ್ನೂ ಹೆಚ್ಚು ಪರಿಣಾಮಕಾರಿಯಾಗಿ ಹಾಗೂ ಆಸಕ್ತಿ ಕೆರಳಿಸುವಂತೆ ರಚಿಸಬಹುದಾಗಿತ್ತೇನೋ? ಆದರೂ ಕುಡಿಯರ ಜೀವನವನ್ನು ಹೊರಗಿನವರೊಬ್ಬರ ದೃಷ್ಟಿಕೋನದಿಂದ ನೋಡುವ ಪ್ರಯತ್ನ ಈ ಕಾದಂಬರಿಯಲ್ಲಿಲ್ಲ. ಅಲ್ಲಿಯ ಪಾತ್ರಗಳ ದೃಷ್ಟಿಯಿಂದಲೇ ಮತ್ತು ನಿರೂಪಣಾ ವಿಧಾನವನ್ನು ಉಪಯೋಗಿಸಿ ಅಲ್ಲಿಯ ಜೀವನದ ಚಿತ್ರಣ ಕಾದಂಬರಿಯ ಆಶಯವಾಗಿರುವುದರಿಂದ ಇಲ್ಲಿ ಬರುವ ತಿರುಮಲಭಟ್ಟರು, ತುಕ್ರ, ಕ್ರಿಶ್ಚಿಯನ್, ಒಡೆಯರು ಇವರಾರೂ ದುಷ್ಟತನದ ಪ್ರತಿನಿಧಿಗಳೆಂಬಂತೆ ಚಿತ್ರಿತವಾಗಿಲ್ಲ. ಕಾದಂಬರಿಯ ದೃಷ್ಟಿಕೋನ ಕುಡಿಯರ ದೃಷ್ಟಿಕೋನವಾಗುವಂತೆ ಕಾದಂಬರಿಯು ರೂಪಿತವಾಗಿರುವುದರಿಂದ ಇಲ್ಲಿ ಉದ್ದೇಶಿತ ದುಷ್ಟತನದ ವಿಶ್ಲೇಷಣೆಗೆ ಅವಕಾಶವೇ ಇಲ್ಲ. ಇದರಿಂದಾಗಿಯೇ ಓದುಗರು 'ಕುಡಿಯರ' ಸಮಾಜ ವ್ಯವಸ್ಥೆಯ ಬಗ್ಗೆ ಸ್ವತಂತ್ರ ನಿರ್ಧಾರಗಳನ್ನು ಇಲ್ಲಿ ತೆಗೆದುಕೊಳ್ಳಬಹುದಾಗಿದೆ.

ಕಾರಂತರು ಬರೆದ 'ಚೋಮನದುಡಿ' ಮತ್ತು 'ಕುಡಿಯರ ಕೂಸು' ಎರಡೂ ಕಾದಂಬರಿಗಳು ಬುಡಕಟ್ಟು ಸಂಸ್ಕೃತಿಯ ಕಥನಗಳಾಗಿವೆ. 'ಚೋಮನದುಡಿ' ಕಾದಂಬರಿಯಲ್ಲಿ ಮಾರಿಹೊಲೆಯನ ಕಥೆಯಿದ್ದರೆ, 'ಕುಡಿಯರ ಕೂಸು' ಕಾದಂಬರಿಯಲ್ಲಿ ಮಲೆಕುಡಿಯರ ಕಥನವಿದೆ. ಚೋಮನದುಡಿ ಕಾದಂಬರಿಯಲ್ಲಿ ಚೋಮ ಮತ್ತು ಅವನ ಸಮಸ್ಯಾತ್ಮಕ ಘಟನೆಗಳು ಕೇಂದ್ರ. ಆದರೆ ಕುಡಿಯರ ಕೂಸು ಕಾದಂಬರಿಯು ಹಾಗಲ್ಲ. ಇದರಲ್ಲಿ ಒಬ್ಬ ಸಾಮಾನ್ಯ ಪ್ರಶ್ನೆಗಳನ್ನು ತನಗೆ ತಾನೇ ಹೇಳಿಕೊಂಡಂತಿಲ್ಲ. ಯಾವ ಕಾದಂಬರಿಕಾರರೂ ಲಕ್ಷ್ಯ ವಹಿಸದಿರುವ ಬುಡಕಟ್ಟು ಸಂಸ್ಕೃತಿಯ

ವಿವರಗಳನ್ನು ಕಾರಂತರು ಬ್ರಾಹ್ಮಣರಾಗಿ ಬರೆದದ್ದು ಯಾವುದೇ ಲೇಖಕ ತನ್ನ ಜಾತಿಯನ್ನು ಕುರಿತು ಬರೆದದ್ದು, ಅದು ಪರಿಪೂರ್ಣತೆ ಎಂಬ ಮಾತಿಗೆ ಅಪವಾದದಂತಿದೆ.

ಕಾರಂತರು ಬುಡಕಟ್ಟಿಗೆ ಸೇರಿದ ಸಂಸ್ಕೃತಿ ಜೀವನ ಕ್ರಮಗಳನ್ನು ಎರಡೂ ಕಾದಂಬರಿಗಳಲ್ಲಿ ಬರೆದರು. ಕನ್ನಡ ಕಾದಂಬರಿಯ ಇತಿಹಾಸ ಮತ್ತು ಬೆಳವಣಿಗೆಗಳನ್ನು ತುಂಬಾ ಸೂಕ್ಷ್ಮವಾಗಿ ಗಮನಿಸಿದರೆ ಇದು ವಿಶೇಷವೆಂದು ಅನಿಸುತ್ತದೆ. ಕರ್ನಾಟಕದ ಬುಡಕಟ್ಟು ಸಂಸ್ಕೃತಿಗಳ ಚಾರಿತ್ರಿಕ ವಿವರಗಳು ಬೇರೆ ಬೇರೆ ಲೇಖನದಲ್ಲಿ ದೊರೆಯುತ್ತದೆ. ಆದರೆ ಬುಡಕಟ್ಟು ಸಂಸ್ಕೃತಿಯ ಬಗ್ಗೆ ಬಂದ ಕಾದಂಬರಿಗಳು ಕಡಿಮೆ. ಅದರಲ್ಲಿಯೂ ಈವತ್ತಿಗೂ ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ ಸವಲತ್ತುಗಳು ಅಷ್ಟಾಗಿ ದೊರೆಯದಿರುವ ಕೊರಗರು 'ಮಲೆಕುಡಿಯರು' ಶೋಷಿತರಾಗಿಯೇ ಉಳಿದಿದ್ದಾರೆ. ಇಂಥವರ ಬಗ್ಗೆ ಕಾರಂತರು ಕಾದಂಬರಿಗಳಲ್ಲಿ ಬರೆದಿದ್ದಾರೆ ಎನ್ನುವುದು ಮುಖ್ಯ.

"ಕಾರಂತರು ಜಾತಿಯಿಂದ ಬ್ರಾಹ್ಮಣ ವರ್ಗಕ್ಕೆ ಸೇರಿದವರು. ಸಾಂಪ್ರದಾಯಿಕ ಬ್ರಾಹ್ಮಣ ವರ್ಗಕ್ಕೆ ಅಸ್ಪೃಶ್ಯರ ಬಗ್ಗೆ ಯಾವ ಕುತೂಹಲವೂ ಇಲ್ಲ. ಕೊರಗರನ್ನು ದಕ್ಷಿಣ ಕನ್ನಡ ಜಿಲ್ಲೆಯ ಭೂಮಾಲೀಕ ವರ್ಗವು ಕೆಲಸಕಾರ್ಯಗಳಿಗೆ ಕರೆಯುತ್ತಿರಲಿಲ್ಲ. ಕೊರಗರು ಬುಟ್ಟಿ ಮಾಡುವುದು ಇತ್ಯಾದಿ ಕೆಲಸಗಳನ್ನು ಮಾಡುತ್ತಿದ್ದರು. ಕೊರಗರು ಮಾಡಿರುವ ಬುಟ್ಟಿಗಳನ್ನು ಬ್ರಾಹ್ಮಣರು ಮುಟ್ಟಬೇಕಾದರೂ ಅದನ್ನು ಶುದ್ಧಿ ಮಾಡುತ್ತಿದ್ದರು. ಮುಟ್ಟಿಸಿಕೊಳ್ಳುವುದಂತೂ ದೂರದ ಮಾತು. ಬ್ರಾಹ್ಮಣರ ಈ ಧೋರಣೆಯು ೧೯೫೦ರ ವೇಳೆಯಲ್ಲಿ ಮಹತ್ವದ ಬದಲಾವಣೆಗೆ ಸರಿಯಾಗಿರಲಿಲ್ಲ. ಇಂಥ ಸಂದರ್ಭದಲ್ಲಿಯೂ ವಸಾಹತು ಕಾಲದ ಶಿಕ್ಷಣದ ಈ ಮಾದರಿಯ ಸಮಾಜವನ್ನು ರೂಪಾಂತರಗೊಳಿಸುವುದಕ್ಕೆ ಬಯಸಿತು. ಇದೊಂದು ಕಡೆಯಾದರೆ ಅಸ್ಪೃಶ್ಯತೆಯ ನಿವಾರಣೆಯು ಒಂದು ಆಂದೋಲನದಂತೆ ಕಾಣಿಸಿಕೊಂಡಿತು. ಕಾರ್ನಾಡ್ ಸದಾಶಿವರಾಯರು, ಕುದ್ಮಲ್ ರಂಗರಾಯನಂಥವರು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಈ ತರಹದ ಪ್ರಯತ್ನ ಮಾಡಿದರು"[೧] ಇವರ ಪ್ರೇರಣೆ ಕಾರಂತರ ಮೇಲೂ ಆಗಿದೆಯೆನ್ನಬಹುದು. ಈ ಮಾದರಿಯ ಚಿಂತನೆಯ ಫಲ 'ಕುಡಿಯರ ಕೂಸು'.

**ಚೋಮನದುಡಿ:**

ಕಾದಂಬರಿಯ ಹೆಸರೇ ತಿಳಿಸುವಂತೆ 'ಚೋಮನದುಡಿ' ಮತ್ತು ಅವನ ದುಡಿಯೊಳಗಿನ ಬಾಂಧವ್ಯದ ಕತೆ. ಚೋಮನದುಡಿ ಕಾದಂಬರಿಯಲ್ಲಿ ಜಾತಿ ಮತ್ತು ವರ್ಗಸಂಘರ್ಷಗಳೆರಡೂ ಮಿಳಿತವಾಗಿರುವುದು ಕಂಡುಬರುತ್ತದೆ. ಹೇಗೆಂದರೆ ಇಲ್ಲಿನ ಚೋಮ ಜಾತಿ

೧. ಕುದ್ಮಲ್ ರಂಗರಾಯರು ೧೮೯೨ರಲ್ಲಿ ದಲಿತರಿಗಾಗಿ ಶಾಲೆಗಳನ್ನು ತೆರೆದರು (ಕಮಲಾಕ್ಷ.ಪಿ. ಪುಟ ೧೩)

ಸಂಕೇತವಾದರೆ ಸಂಕಪಯ್ಯ ವರ್ಗ ಸಂಘರ್ಷಕ್ಕೆ ಕಾರಣವಾಗಿದ್ದಾನೆ. ಆದ್ದರಿಂದ ಈ ಕೃತಿ ಜಾತಿ ಮತ್ತು ವರ್ಗಸಂಘರ್ಷವನ್ನು ಬಹಳ ಸೂಕ್ಷ್ಮವಾಗಿ ತನ್ನ ಒಡಲಲ್ಲಿ ಅಡಗಿಸಿಟ್ಟುಕೊಂಡಿದೆ.

ಈ ಕಾದಂಬರಿಯಲ್ಲಿ ಹೊಲೆಯನಾದ ಚೋಮ ಸಮಾಜದಲ್ಲಿ ಅತ್ಯಂತ ಬಡತನ ಜೀವನ ನಡೆಸುತ್ತಿರುವ ವ್ಯಕ್ತಿ. ತಾನೊಬ್ಬ ಬೇಸಾಯಗಾರನಾಗಬೇಕೆಂಬ ಅವನ ಆಸೆಗೆ ಅಡ್ಡವಾಗಿ ನಿಂತಿದೆ ಜಾತಿ. ಹೊಲೆಯರು ಬೇಸಾಯ ಮಾಡಬಾರದೆಂಬ ಸಮಾಜ ಹಾಕಿದ ನಿರ್ಬಂಧ ಜೀವನಪರ್ಯಂತ. ಹೇಗಾದರೂ ತನ್ನ ಆಸೆಯನ್ನು ಕೈಗೂಡಿಸಬೇಕೆಂದು ವಿಫಲ ಪ್ರಯತ್ನ ನಡೆಸಿದ ವ್ಯಕ್ತಿ ಚೋಮ. ಆದರೂ ಅವನು ತನ್ನ ಮೇಲಿನ ಜನರನ್ನು ದೂರುವುದಿಲ್ಲ, ಬೈಯುವುದಿಲ್ಲ, ಸಮಾಜದಲ್ಲಿ ಇರುವ ತನ್ನ ಸ್ಥಾನ, ತಾನು ಹೀಗೆ ಬಾಳಬೇಕಾದದ್ದು ನ್ಯಾಯವೇ ಎಂದು ಒಪ್ಪಿಕೊಂಡು ಬಾಳುತ್ತಿದ್ದಾನೆ. ಅದನ್ನು ಕಂಡಾಗ ನಮ್ಮ ಸುತ್ತಮುತ್ತ ಇರುವ ಹಲವಾರು ಚೋಮರು ಇದೇ ರೀತಿ ಯಾರನ್ನೂ ಪ್ರಶ್ನಿಸದೆ, ಹಳಿಯದೆ ನಿರ್ವಿಕಾರವಾಗಿ ತಮ್ಮ ಬಡತನವನ್ನು, ಶೋಚನೀಯ ಸ್ಥಿತಿಯನ್ನು ಒಪ್ಪಿಕೊಂಡು, ಅಪ್ಪಿಕೊಂಡು ಸಮಾಜ ಹೊರಿಸಿದ ಕಟ್ಟುನಿಟ್ಟುಗಳನ್ನು ಸಹಿಸಿ ಬಾಳುತ್ತಿರುವುದು ಕಣ್ಣಿಗೆ ಕಟ್ಟುತ್ತದೆ. ಚೋಮನ ಬಡತನ ಜೀವನ ಅನಿವಾರ್ಯತೆಗಳು, ಆಸೆಗಳು ಯಥಾವತ್ತಾಗಿ ಚಿತ್ರಿತವಾಗಿದೆ. ಆದರೆ ಆಸೆ ಎಂಬುದಕ್ಕೆ ಇಲ್ಲಿ ಕೊಟ್ಟ ಗೌರವದ ಮಟ್ಟ ಮಾತ್ರ ಅಭ್ಯಾಸಯೋಗ್ಯವಾಗಿದೆ. ದಲಿತನಾದ ಚೋಮನಿಗೆ ತಾನು ಒಂದಿಷ್ಟು ಭೂಮಿಯನ್ನು ಹೊಂದಿ ಕೃಷಿಕನಾಗಬೇಕೆಂಬ ಆಸೆ ಇದೆ. ಇದಕ್ಕೆ ಸಾಮಾಜಿಕ ಬಂಧನಗಳಿವೆ. ಸಾಂಪ್ರದಾಯಿಕ ಕಟ್ಟುಪಾಡುಗಳಿಂದಾಗಿ ಚೋಮನು ಕೃಷಿಕನಾಗಲಾರ. ಅವನು ಜೀತದಾಳಿನಂತೆ ಬದುಕುವುದನ್ನು ಬಿಟ್ಟು ಇನ್ನೇನೂ ಮಾಡಲಾರ. ಆತನ ಒಡೆಯರಿಗೆ ಚೋಮನು ಕೃಷಿಕನಾಗಲಿ ಎಂಬ ಭಾವನೆ ಇದ್ದರೂ ಕೂಡ ತನ್ನ ತಾಯಿ ಮತ್ತು ಸುತ್ತಮುತ್ತಲಿನ ಸಮಾಜದ ಕಟ್ಟುಪಾಡುಗಳಿಗೆ ಹೆದರಿ ಆತನು ಚೋಮನಿಗೆ ತುಂಡುಭೂಮಿಯನ್ನು ಕೊಡದವನಾಗಿದ್ದಾನೆ. ಹೀಗಾಗಿ ಇಂತಹ ವಿಷಮಯ ಪರಿಸ್ಥಿತಿಗೆ ವ್ಯಕ್ತಿಗಳಿಗಿಂತ ಹೆಚ್ಚಾಗಿ ಒಂದು ಸಮಾಜವ್ಯವಸ್ಥೆ ಕಾರಣವಾಗಿದೆ ಎಂಬಂತೆ ಕಥಾನಕ ಚಿತ್ರಿತವಾಗಿದೆ. ಕಟ್ಟುಪಾಡುಗಳಿಂದ ಚೋಮ ಹೇಗೆ ಬಂಧಿತನೋ ಹಾಗೆಯೇ ಮೇಲ್ವರ್ಗದವರೂ ಬಂಧಿತರು ಎಂಬ ಅಂಶ ಕಾದಂಬರಿಯಲ್ಲಿ ಅಂತರ್ಗತವಾಗಿದೆ. ಆದರೆ ಅದು ಕಾದಂಬರಿಯ ಕೇಂದ್ರ 'ವಿಷಯವಸ್ತು'ವಾಗಿ ತೋರುವುದಿಲ್ಲ. ಮೂಲವಸ್ತು, ವಾಸ್ತವಿಕ ಚಿತ್ರಣ ಅಥವಾ ವಾಸ್ತವಿಕ ಚಿತ್ರಣದಲ್ಲಿ ಬೆರೆತ ಸಾಹಿತ್ಯಕ ಅಂಶವೆಂದರೆ ಚೋಮನು ಆತ್ಮಗೌರವಕ್ಕಾಗಿ ನಡೆಸುವ ಹೋರಾಟ. ಹೀಗಾಗಿಯೆ ಪ್ರಸ್ತುತ ಸಾಮಾಜಿಕ ಸನ್ನಿವೇಶದಲ್ಲಿ ಇಂತಹ ಕಾದಂಬರಿಗಳು ಮಹತ್ವದ ಕೃತಿಗಳಾಗಿ ಉಳಿಯುವುದು. ದಲಿತರ ಆತ್ಮಗೌರವ ಮೂಡಬೇಕೆಂಬುದರ ಬಗೆಗೆ ಇತ್ತೀಚೆಗೆ ಬಹುಮುಖ್ಯ ವಿಷಯವಾಗಿ ಚರ್ಚೆಯಾಗುತ್ತಿದೆ. ವ್ಯಕ್ತಿಶಃ

ಆತ್ಮಗೌರವ ಮೂಡಬೇಕಾದದರೆ ಸಮಷ್ಟಿಯಲ್ಲಿ 'ಆತ್ಮಸಮ್ಮಾನ' ಮೂಡಬೇಕಾಗಿದೆ. ಚೋಮನ ಹೋರಾಟ ಎಷ್ಟೇ ಚಿಕ್ಕದಾಗಿರಲಿ, ಆರ್ಥಿಕ ಮತ್ತು ಸಾಮಾಜಿಕವಾಗಿ ಆಂಶಿಕವಾಗಿರಲಿ ಈ ದೃಷ್ಟಿಯ ಹೋರಾಟವು ಪ್ರತಿಭಟನೆಯ ರೂಪದಲ್ಲಿಲ್ಲ. ಹೋರಾಟ ವ್ಯವಸ್ಥೆಯಲ್ಲಿಯೇ ಒಳಗೊಂಡಿರುವ ಮಾನವೀಯ ಅಂಶಗಳ ಸದುಪಯೋಗ ಪಡೆದುಕೊಂಡು ಆತ್ಮಗೌರವವನ್ನು ಹೊಂದಿದ ಕೃಷಿಕನಾಗುವ ಮಟ್ಟಿಗೆ ಸೀಮಿತವಾಗಿದೆ.

ಅಂದರೆ ಸಮಾಜದ ಮುಖ್ಯಸಮಸ್ಯೆಯಾಗಿ ಜಾತೀಯತೆ ಇದ್ದು, ಜಾತಿ-ಮತ, ಕೋಮು-ಕೋಮುಗಳಿಗೆ ಅಪಾರದ್ವೇಷ, ಒಂದರಲ್ಲೊಂದಕ್ಕೆ ವಿದ್ರೋಹ, ವಿದ್ವೇಷ, ಹಲವಾರು ಗುಂಪುಗಳು, ಭೂಮಿಯಲ್ಲಿ ದೇವರ 'ಏಜೆಂಟರು' ಮತ್ತೆ ಕೆಲವರು. ಅವರಿಗೆ ಕೊಂಚ ತಗ್ಗಿನವರಾದರೂ ಹಣದಿಂದ ಪ್ರತಿಷ್ಠಾವಂತರು, ಹೀಗೆ ಇಂತಹವರಲ್ಲಿ ಕೀಳರಲ್ಲಿ ಕೀಳೆಂದರೆ ಚೋಮನಂತಹ ಹೊಲೆಯರು. ಈ ಹೊಲೆಯರ ಬಾಳಂತೂ ಹೇಳುವಂತಿಲ್ಲ, ನಾಯಿನರಿಗಳಿಗೂ ಕೀಳುಬಾಳು. ಮಾನವತೆಯೇ ಇಲ್ಲ. ಆತ್ಮವಿಲ್ಲ. ಮಾನವಂತರಾಗಿ ಗೌರವದಿಂದ ನಾಲ್ಕು ಜನರಲ್ಲಿ ಬಾಳಲು ಹಕ್ಕಿಲ್ಲ. ಕಣ್ಣಿಗೆ ಬೀಳುವುದೇ ಮಹಾಪಾಪ. ಮುಟ್ಟಿಕೊಂಡರಂತೂ ನರಕದ ಹಿಂಸೆಗಳೆಲ್ಲವೂ ಇಲ್ಲಿಯೇ. ಯಾವ ಬಗೆಯ ಆಸೆ ಇದ್ದರೂ ಅಲ್ಲಿಯೇ ಸಾಯಗೊಡಬೇಕು. ಯಾರಿಂದಲೂ ಯಾವ ಬಗೆಯ ವಿಶ್ವಾಸವನ್ನು ಬಯಸಕೂಡದು. ಜೀವಂತ ಮಾನವನಾಗಿದ್ದರೂ ಮಾನವನ ಮೂಲಪುರುಷಗಳಿಗಿಂತಲೂ ಕೀಳು. ಇದು ಹೊಲೆಯರ ಸ್ಥಿತಿ. ಅಂತಹ ಹೊಲೆಯರಲ್ಲಿಯೂ ಮೇಲು-ಕೀಳು, ಒಳಜಾತಿಗಳು, ಗುಂಪುಗಳು, ಅವುಗಳ ವಿಷಮತೆ ಅಥವಾ ವಿಷಮತೆಯಿಂದ ನಡೆಯುವ ಅನಾಹುತಗಳು. ಚೋಮನಿಗೆ ಮಾನವನ ಸಹಜವಾದ ಆಸೆಗಳಿವೆ. ಒಕ್ಕಲಾಗುವ ಒಂದು ಹಿರಿಯ ಆಸೆ ಅವನಿಗೆ. ಆದರೆ ಸಮಾಜ, ಸಂಪ್ರದಾಯ ಇದಕ್ಕೆ ಅಡ್ಡಲಾಗಿ ನಿಲ್ಲುತ್ತದೆ. ಜಾತಿಯಿಂದಾಗಿ ಅವನ ಬಾಳು ಮುಕ್ಕಾಗುತ್ತದೆ. ಚನಿಯ, ಗುರುವರ ಬಲಿಯಾಗುತ್ತಾರೆ. ಇದು ಸಮಾಜದ ಮತ್ತೊಂದು ಸಮಸ್ಯೆ. ಇದರ ಜೊತೆಗೆ ಬೇರೆ ಹಲವು ಸಮಸ್ಯೆಗಳು ಸೇರಿಕೊಂಡಿವೆ. ಬಡತನದ ಪ್ರಶ್ನೆ ಚೋಮನನ್ನು ಕಾಡುತ್ತದೆ. ದಾಸ್ಯದ ದುಃಖ ಅವನಿಗೆ ತನ್ನ ಹಿಂದಿನವರಿಂದ ಬಂದದ್ದು, ಕುಡಿಯದಿದ್ದರೆ ಜೀವವೇ ಹೋಗಿಬಿಡುವುದೆನ್ನುವ ಕುರುಡುನಂಬಿಕೆಯಿಂದ ಹುಟ್ಟಿದ ಕುಡಿತದ ಸಮಸ್ಯೆ ಅಂಟುರೋಗದಂತೆ ಇವನ ಮಕ್ಕಳಿಗೂ ಬೆನ್ನುಹತ್ತುವುದು. ಮೈಯೊಂದಿಗೆ ಬೆಳೆದುಬಂದ ಬಡತನ, ಬಿತ್ತಿದ ಬೆಳೆ, ಸಾಲ, ಅದಂತೂ ಜೀವ ಹೋದ ಮೇಲೂ ತೀರುವಂತಿಲ್ಲ. ಇವುಗಳೆಲ್ಲದರೆ ಜೊತೆಗೆ ಮನುಷ್ಯನಿಗೆ ಸಹಜವಾಗಿ ಬರುವ ಪ್ರಶ್ನೆ ಹೆಣ್ಣಿನ ಸಮಸ್ಯೆ. ಯಜಮಾನನ ಕಾಕದೃಷ್ಟಿಗೆ ಬಿದ್ದ ಬೆಳ್ಳಿ ಯೌವನಕ್ಕೆ ಬಂದ ಸಹಜ ಲೈಂಗಿಕ ಪ್ರೇರಣೆಗೆ ಬಲಿ ಬಿದ್ದು

ಯಜಮಾನನ ಸೂಳೆಯಾಗಿ, ತಾನು ತನ್ನ ತಂದೆಯ ಸಾಲ ತೀರಿಸಲು ಈ ಹಾದಿ ಹಿಡಿಯಬೇಕಾಯಿತೆನ್ನುವ ಆತ್ಮವಂಚನೆ ಮಾಡಿಕೊಂಡು ಲೈಂಗಿಕತೆಯ ದಾಸ್ಯದಲ್ಲಿ ಮುಳುಗಿ ದೇವರನ್ನಲದೆ ಪೂಜಾರಿ ಸೆಲೆಗಾರ ಮನ್ವೇಲನನ್ನು ತೃಪ್ತಿಗೊಳಿಸಲು ಇಳಿದ ಕರುಣಾಜನಕ ಚಿತ್ರ ಸಮಾಜದ ಮುಖ್ಯ ಸಮಸ್ಯೆಗಳಲ್ಲೊಂದಾಗಿದೆ.

ಒಟ್ಟಾರೆಯಾಗಿ ಹೇಳುವುದಾದರೆ 'ಚೋಮನದುಡಿ' ನಮ್ಮ ಸಾಮಾಜಿಕ ವ್ಯವಸ್ಥೆ ಒಂದು ಜೀವಸಮಾದಿಗೆ ಕಾರಣವಾಗುವ ಪರಿಯನ್ನು ಬಿಡಿಸಿಡುತ್ತದೆ. ಅಂದರೆ ಹೊಲೆಯನಾದ ಚೋಮ ತನ್ನ ಹುಟ್ಟಿನ ಕಾರಣದಿಂದಲೇ ಎಲ್ಲಾ ನೋವಿಗೆ ಈಡಾಗುತ್ತಾನೆ. ತುಂಡುನೆಲ ತನ್ನದಾಗಿಸಿಕೊಳ್ಳುವ ಅವನ ಬಯಕೆಯನ್ನು ಸುತ್ತಲ ಸಮಾಜ ತುಳಿಯುತ್ತದೆ. "ಜಾತಿಪ್ರಜ್ಞೆಯ ಮೂಲಕ ಜನಗಳನ್ನು ಮೇಲು-ಕೀಳೆಂದು ಪರಿಗಣಿಸುವವರ ಕ್ರೌರ್ಯ, ಇದ್ದವರ ಹಣ, ಇಲ್ಲದವರ ಬದುಕಿನಲ್ಲಿ ತಂದೊಡ್ಡಬಹುದಾದ ಅನಾಹುತಗಳು ಇಲ್ಲಿ ಹೃದಯವಿದ್ರಾವಕವಾಗಿ ಚಿತ್ರಿತವಾಗಿದೆ. ಚೋಮನಿಗಾದ ನಿರಾಸೆಯನ್ನು ಅವನ ದುಡಿಯೇ ವ್ಯಕ್ತಪಡಿಸಬಲ್ಲದು. ಅವರ ದನಿ ಅಡವಿಯಲ್ಲಿ ಪ್ರತಿಧ್ವನಿಸುತ್ತದೆ. ನಾಡಿನಲ್ಲಿಯೇ ದಲಿತರ ನಿರಾಸೆಯ ದನಿಯಂತೆ ಎಲ್ಲೆಲ್ಲಿಯೂ ಮೊಳಗುತ್ತದೆ".[೧]

'ಚೋಮನದುಡಿ'ಯ ಜಗತ್ತು ತೀರಾ ಭಿನ್ನವಾದುದು. ಇಲ್ಲಿ ವ್ಯಕ್ತಿ ಮತ್ತು ಸಮಾಜದ ಸಂಬಂಧವೇ ಕೃತಿಯ ವಿಷಯ. ಚೋಮನನ್ನು ಹತ್ತಾರು ಬಾಧೆಗಳು ಕಾಡುತ್ತವೆ. ಆದರೆ ಇವೆಲ್ಲಾ ಸಮಾಜದ ವ್ಯವಸ್ಥೆಯ ಮರಿಗಳೇ. ಮಾರಿಹೊಲೆಯರಿಗೆ ಯಾವ ಗೌರವವಾಗಲೀ, ಮನುಷ್ಯರಿಗೆ ಸಲ್ಲಬೇಕಾದ ಯಾವ ಗಣನೆಯಾಗಲೀ ಸಲ್ಲಬೇಕಾಗಿಲ್ಲ. ಅವರ ನೆರಳಿನ ಸ್ಪರ್ಶವೂ ಮೈಲಿಗೆ, ಆದುದರಿಂದ ದೇಹದ ಗಾಯದಂತೆ ಅಥವಾ ಕೊಳೆತುಹೋದ ಒಂದು ಭಾಗದಂತೆ ಸಮಾಜದಲ್ಲಿ ಅವರು. ಹಾಗೆಯೇ ಅವರು ಬದುಕಬೇಕು ಎನ್ನುವುದು ಸಮಾಜದ ಕಟ್ಟಳೆ. ಅದೇ ಕಟ್ಟಳೆಯ ಸಂತತಿ ನಿರಕ್ಷರತೆ, ಮೂಢನಂಬಿಕೆ, ಬಡತನ, ಸ್ವಾತಂತ್ರ್ಯದ ನಿರಾಕರಣೆ.

'ಚೋಮನದುಡಿ'ಯು ಕಾರಂತರಿಗೆ 'ಮಾನವೀಯ ಸಂವೇದನೆಯ ಕೃತಿ' ಎಂದು ಹೆಸರು ತಂದುಕೊಡುವುದರ ಬದಲು 'ಬಂಡಾಯ ಕಾದಂಬರಿ', 'ಪ್ರಗತಿವಿರೋಧಿ ಕಾದಂಬರಿ' ಎನ್ನುವ ಹೆಸರು ತಂದುಕೊಟ್ಟಿತು. ಆದರೆ ಸೂಕ್ಷ್ಮವಾಗಿ ನೋಡಿದರೆ ಚೋಮನದುಡಿ ಮಾನವೀಕರಣದ ಪರವಾಗಿ ನಿಂತ ಬಹುದೊಡ್ಡ ಮಹತ್ವದ ಕೃತಿ.

ಈ ಕಾದಂಬರಿಯ ಮತ್ತೊಂದು ಸ್ವಾರಸ್ಯಕರವಾದ ಸಂಗತಿ ಎಂದರೆ ಇದನ್ನು ಓದುವಾಗ ಸಮಾಜದ ಕಟ್ಟುಕಟ್ಟಲೆಗೆ ಒಳಗಾದ ಪಾತ್ರಗಳ ಮನಸ್ಸಿನಲ್ಲಿ, ಅವರ ಇತಿಮಿತಿಯಲ್ಲಿ ಅವರದೇ ಆದ

೧. ವಿಶ್ವಾಮಿತ್ರ ಸೃಷ್ಟಿ. ಶ್ರೀರಂಗ. ಪುಟ ೨೨

ತೀರ್ಮಾನಕ್ಕೆ ಬರಬಹುದಾಗಿದ್ದು ಈ ಪಾತ್ರಗಳು ಅನುಭವಿಸುವ ಬವಣೆ, ನೋವು, ತಮಗಾದ ಅನ್ಯಾಯಕ್ಕೆ ಅವರು ತೋರಿಸುವ ಪ್ರತಿಕ್ರಿಯೆ ಇವನ್ನೆಲ್ಲಾ ನೋಡುತ್ತಿದ್ದಂತೆ ಓದುಗರ ಮನಸ್ಸಿನಲ್ಲಿ ತೀರಾ ಭಿನ್ನವಾದ ಯಾವುದು ಸರಿ, ಯಾವುದು ತಪ್ಪು ಎಂಬ ಸ್ಪಷ್ಟವಾದ ಅಭಿಪ್ರಾಯ ಮೂಡುತ್ತದೆ.

ಈ ಕಾದಂಬರಿಯ ವರ್ಣನೆಗಳಲ್ಲಿ ಮಾತಿನ ಚಮತ್ಕಾರವಾಗಲೀ, ಶಬ್ದದ ಆಡಂಬರವಾಗಲೀ ಇಲ್ಲದಿರಬಹುದು. ಆದರೆ ಹೃದಯ ಮುಟ್ಟುವ ವೇದನೆಯ ಅರಿವು ಓದುಗನಿಗೆ ಆಗದಿರುವುದಿಲ್ಲ.

ಒಟ್ಟಾರೆಯಾಗಿ ಹೇಳುವುದಾದರೆ ಕಾರಂತರ ಈ 'ಕುಡಿಯರ ಕೂಸು' ಮತ್ತು 'ಚೋಮನ ದುಡಿ' ಕಾದಂಬರಿಗಳು ಕ್ರಮವಾಗಿ ಮಲೆಕುಡಿಯರ ಚಿತ್ರವನ್ನು, ಸಮಾಜದ ಕೀಳುವರ್ಗದ ಹೊಲೆಯನಾದ ಚೋಮನ ಜೀವನದ ಚಿತ್ರವನ್ನು ನೀಡುತ್ತದೆ. ಇಲ್ಲಿ ಕಾರಂತರು ಕೇವಲ ಕುಡಿಯರ ಜೀವನವನ್ನೇ ಆಗಲಿ, ಚೋಮನ ಜೀವನವನ್ನೇ ಆಗಲಿ ತಲಸ್ಪರ್ಶಿಯಾಗಿ ನೋಡದೆ ಅವರ ಬದುಕಿನ ಆಳವನ್ನು ಅಧ್ಯಯನ ಮಾಡಿ ಒಂದು ಕಲಾಕೃತಿಯ ಚೌಕಟ್ಟಿಗೆ ತಂದು ರಚಿಸಿರುವುದು ಅವರ ಮಹತ್ವದ ಸಾಧನೆಯಾಗಿದೆ.

ಸಮಾಜದ ಮೇಲ್ವರ್ಗವೆಂದೇ ಪ್ರತಿಬಿಂಬಿತವಾಗಿರುವ ಬ್ರಾಹ್ಮಣ ಸಮುದಾಯದಿಂದ ಬಂದ ಕಾರಂತರು ಸಮಾಜದ ಕಡೆಗಣನೆಗೆ ಒಳಗಾಗಿರುವ ದಲಿತರು ಅಥವಾ ಅಸ್ಪೃಶ್ಯರ ಬಗ್ಗೆ ಹೊಂದಿರುವ ಕಾಳಜಿ ಅಪಾರವಾಗಿದ್ದು, ಅವರು ಕೇವಲ ದಲಿತರ ಬದುಕಿನ ನೈಜ ಚಿತ್ರಣವನ್ನು ನೀಡಿದ್ದು ಅವರ ಸಮಸ್ಯೆಗಳಿಗೆ ಪರಿಹಾರ ಸೂಚಿಸಿಲ್ಲವಾದರೂ ಸಹ ಓದುಗರ ಮನಸ್ಸಿನಲ್ಲಿ ಅವರ ಬಗ್ಗೆ ಮಾನವೀಯ ನೆಲೆಯಲ್ಲಿ ಚಿಂತಿಸುವಂತೆ ಮಾಡುವುದು ಇವರ ಕಲಾಕೃತಿಯ ಉನ್ನತಿಯಾಗಿದೆ.

ಚೋಮನು ನುಡಿಸುವ 'ದುಡಿ'ಗೆ ಯಾವುದೇ ನಾದಮಾಧುರ್ಯವಿಲ್ಲ. ಇದು ಆತನ ಜೀವನದಂತೆ ಯಾಂತ್ರಿಕವಾಗಿ ಮಾಧುರ್ಯವಿಲ್ಲದ ನಾದವನ್ನು ಹೊರಡಿಸುತ್ತದೆ. ಆದರೆ ಅದೊಂದೇ ಆತನ ದುಃಖವನ್ನು ಮರೆಯಿಸಬಲ್ಲ ಸಾಧನ! ದುಃಖವನ್ನು ಮರೆಯಿಸಬಲ್ಲ ಈ ಸಾಧನದ ಜೊತೆಗೆ ಕುಡಿತದ ಚಟವೂ ಸೇರಿಕೊಂಡಿದೆ. ದುಡಿ ನುಡಿಸುವುದು ಕಲೆ; ಕುಡಿಯುವುದು ಕೆಟ್ಟ ಚಟ. ಇವುಗಳ ಸಂಗಮದಿಂದಾಗಿಯೇ ಚೋಮನು ಅನಿವಾರ್ಯತೆಗಳನ್ನು ಸಹಿಸಿಕೊಂಡಿದ್ದಾನೆ. ಈ ವಿಷಯದಲ್ಲಿ ಮಾತ್ರ ಕಾದಂಬರಿಯು ಅಪೂರ್ವವಾದ ಏಕತೆಯನು ಮತ್ತು ಗಮನಾರ್ಹವಾದ ಸೂಚ್ಯಶಕ್ತಿಯನ್ನು ಸಾಧಿಸಿದೆ. 'ದುಡಿ'ಯು ಅನಾಯಾಸವಾಗಿ ಚೋಮನ ನೀರಸಬಾಳಿಗೆ ಸಂಕೇತವಾಗಿ ಅರಳುತ್ತದೆ.

ಇವರಲ್ಲಿ ಕಂಡುಬರುವ ದಲಿತರ ಬಗೆಗಿನ ಕಾಳಜಿ ಅತ್ಯಂತ ಆಳವಾಗಿ ಚೋಮನ ದುಡಿಯಲ್ಲಿ ಕಾಣಿಸಿಕೊಂಡಿದ್ದು "ಈ ಕಾದಂಬರಿಯ ಅಧ್ಯಾಯಗಳು ೧೮ ಇರುವುದರಿಂದ ಮಹಾಭಾರತದ ೧೮ ಅಧ್ಯಾಯಗಳಂತೆ ಇದನ್ನು 'ದಲಿತ ಭಾರತ' ಎಂದು ಕರೆಯಬಹುದು. ಈ ಹಿನ್ನೆಲೆಯಲ್ಲಿ ಇಲ್ಲಿ ದಲಿತ ಭಾರತದ ಚಿತ್ರಣವನ್ನು ಕಾಣಬಹುದು"[೧] ಎಂಬ ರಾಗೌರವರ ಹೇಳಿಕೆಯು ಕೇವಲ ಅಧ್ಯಾಯಕ್ಕೆ ಮಾತ್ರ ಸೀಮಿತವಾಗದೆ ಆ ಕಾದಂಬರಿಯ ಸಾರದ ಬಗ್ಗೆ ಹೇಳಿರುವುದಾಗಿದೆ.

೧. ಷಷ್ಠಿಸಂಪದ, ಡಾ.ರಾಗೌ, ೨೦೦೫, ಪುಟ ೧೧೬

## ಅಧ್ಯಾಯ –೬

## ಕುವೆಂಪು ಕಾದಂಬರಿಗಳಲ್ಲಿ ದಲಿತ ಪ್ರಜ್ಞೆ

ಕುವೆಂಪು "ಪಂಪನಿಂದ ಕುವೆಂಪುವರೆಗೆ" ಎಂದು ಸಾಹಿತ್ಯದ ಸುದೀರ್ಘ ಕಾಲಘಟ್ಟವನ್ನು ನಿರ್ದೇಶಿಸುವಷ್ಟರ ಮಟ್ಟಿಗೆ ಅವರು ಸಾಹಿತ್ಯ ಕ್ಷೇತ್ರದಲ್ಲಿ ಹೆಸರು ಮಾಡಿದ್ದಾರೆ. ತಮ್ಮ ಬಹುಮುಖವಾದ, ಬಹುಮುಖ್ಯವಾದ ರಚನೆಗಳಿಂದ "ಕುವೆಂಪುಯುಗ"ವೆಂದು ಕರೆಯಬಹುದಾದ ಸಾಧನೆಯನ್ನು ತಮ್ಮದಾಗಿಸಿಕೊಂಡಿರುವವರು ಕುವೆಂಪು. ಕನ್ನಡ ಸಾಹಿತ್ಯಶೈಲಿ ಕುವೆಂಪು ಅವರಲ್ಲಿ ಮತ್ತೊಮ್ಮೆ ತನ್ನ ಇನ್ನೊಂದು ಉತ್ತುಂಗ ಶಿಖರವನ್ನು ತೋರಿದೆ. ಬೇಂದ್ರೆಯವರ ಈ ಕವನವಂತೂ ಅವರ ಸಾಹಿತ್ಯ ಸಾಧನೆಯ ವಿಜಯವೈಜಯಂತಿಯ ಪ್ರತೀಕವೇ ಆಗಿದೆ.

> ಯುಗದ ಕವಿಗೆ
> ಜಗದ ಕವಿಗೆ
> ಶ್ರೀ ರಾಮಾಯಣ ದರ್ಶನದಿಂದಲೇ ಕೈ
> ಮುಗಿದ ಕವಿಗೆ – ಮಣಿಯದವರಾರು?
> ರಾಮಕೃಷ್ಣ ವಚನೋದಿತ ಪ್ರತಿಭೆತೆರೆದ
> ಕವನತತಿಗೆ ತಣಿಯದವರು ಆರು?
> ಮಲೆನಾಡಿನ ಸೌಂದರ್ಯಕ್ಕೆ ಕುಣಿದಾಡಿದ
> ಕವಿಯ ಜತೆಗೆ ಕುಣಿಯದವರು ಆರು?

ಕುವೆಂಪು ನಿಜಕ್ಕೂ ಯುಗದ ಕವಿ, ಜಗದ ಕವಿ.

ಆಧುನಿಕ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಕುವೆಂಪು ತುಂಬಾ ಮಹತ್ವದ ಲೇಖಕರಾಗಿದ್ದಾರೆ. ಕಾವ್ಯ, ಕಥೆ, ಕಾದಂಬರಿ, ನಾಟಕ, ವಿಮರ್ಶೆ ಹೀಗೆ ಹೊಸಗನ್ನಡದ ಸಾಹಿತ್ಯದ ಎಲ್ಲ ಪ್ರಕಾರಗಳಲ್ಲಿ ಅವರು ಕೃತಿಗಳನ್ನು ರಚಿಸಿದ್ದಾರೆ. ಅವರ ಒಂದೊಂದು ಸಾಹಿತ್ಯಕೃತಿಯೂ ವಸ್ತುಧೋರಣೆಯಿಂದ ವಿಶಿಷ್ಟವೂ, ವೈವಿಧ್ಯವೂ ಆಗಿದೆ. ಅದೇನೇ ಇರಲಿ ಕುವೆಂಪು ಅವರು ಸಾಹಿತ್ಯವನ್ನು ಸಾಮಾಜಿಕ ಉದ್ದೇಶಗಳಿಗೆ ಒಂದು ಮಾಧ್ಯಮವಾಗಿ ಬಳಸಿಕೊಂಡ ಲೇಖಕರೆಂಬುದರಲ್ಲಿ ಎರಡು ಮಾತಿಲ್ಲ. ಪ್ರಸ್ತುತದಲ್ಲಿ ಕುವೆಂಪು ಕಾದಂಬರಿಗಳಲ್ಲಿ ಮೂಡಿಬಂದಿರುವ ದಲಿತಲೋಕದ ಬಗೆಗೆ ವಿವರಿಸಲಾಗಿದೆ.

ಕನ್ನಡ ಆಧುನಿಕ ಸಾಹಿತ್ಯದಲ್ಲಿ ಕಂಡುಬರುವ ಬಹುತೇಕ ಲೇಖಕರು ತಮ್ಮ ವರ್ಗ, ಜಾತಿಗಳಲ್ಲಿನ ತೊಡಗುಪಿಡುಗುಗಳನ್ನು ಪ್ರಶ್ನಿಸುತ್ತಾ ಸಾಮಾಜಿಕವಾದ ಕಾಳಜಿಯನ್ನು ಮುಖ್ಯವಾಗಿಟ್ಟುಕೊಂಡು ತಮ್ಮ ಸಾಹಿತ್ಯಕೃಷಿಯನ್ನು ಮಾಡಿರುವುದನ್ನು ಕಾಣಬಹುದು. ಅಂದರೆ ಅದು ಅವರು ಇರುವ ಧರ್ಮದ ಬಗ್ಗೆಯಾಗಲೀ, ಸ್ಥಿತಿಯ ಬಗ್ಗೆಯಾಗಲೀ ಕುರುಡು ಒಪ್ಪಿಗೆಯಿಂದ ರಚಿಸಿದ

ಸಾರ್ವತ್ರಿಕ ಸಮ್ಮತವಾದ ಅಭಿಪ್ರಾಯವನ್ನು ಹೊಂದಿ ರಚನೆಯಲ್ಲಿ ತೊಡಗಿದ್ದಾರೆ. ಅದರಂತೆ ಕುವೆಂಪುರವರ ರಚನೆಯನ್ನು ಕಾಣಬಹುದು. ಅಂದರೆ ಕುವೆಂಪು ಹಿಂದೂ ಧರ್ಮವನ್ನು ಸಂಪೂರ್ಣವಾಗಿ ತಿರಸ್ಕರಿಸುವವರಲ್ಲ; ಏಕೆ, ಯಾವ ಧರ್ಮವನ್ನೂ ತಿರಸ್ಕರಿಸುವವರಲ್ಲ; ಆದರೆ ಅದರಲ್ಲಿರುವ ವಿರೋಧಾಭಾಸವನ್ನು ತೀವ್ರವಾಗಿ ಖಂಡಿಸುವವರು. ಆಚರಣೆಯ ಮಟ್ಟದಲ್ಲಿ, ಧರ್ಮದಲ್ಲಿರುವ ದ್ವಂದ್ವಗಳ ಬಗೆಗೆ ಅವರಿಗೆ ತೀವ್ರವಾದ ಅಸಮಾಧಾನ; ಆದರೆ ಅದೇ ಧರ್ಮದ ಇನ್ನೊಂದು ಮುಖವಾದ ಆಧ್ಯಾತ್ಮಿಕತೆಯ ಬಗೆಗೆ ಅಷ್ಟೇ ಗೌರವ. ಇದು ಧರ್ಮದ ಬಗೆಗೆ ಕುವೆಂಪುರವರ ಸ್ಪಷ್ಟವಾದ ನಿಲುವು. ಹೀಗೆ ಅನ್ವೇಷಿಸಿದವರು, ತಮ್ಮ ಗದ್ಯ ಮಹಾಕಾವ್ಯಗಲಾದ "ಕಾನೂರು ಹೆಗ್ಗಡತಿ" ಮತ್ತು "ಮಲೆಗಳಲ್ಲಿ ಮದುಮಗಳು" ಕಾದಂಬರಿಗಳ ಮುಖ್ಯ ಕಾಳಜಿಗಳಲ್ಲಿ ಈ ಧೋರಣೆಯು ಒಂದು ಮುಖ್ಯವಾದ ಅಂಶ. ಕನ್ನಡ ಕಾದಂಬರಿ ಸಂಪ್ರದಾಯವನ್ನು ರೂಪಿಸಿದ ಕೆಲವೇ ಕೆಲವು ಕಾದಂಬರಿಗಳ ಜತೆ ಈ ಕಾದಂಬರಿಗಳು ಸೇರುತ್ತವೆ. ಕನ್ನಡದಲ್ಲಿ ಪ್ರಪ್ರಥಮ ಬಾರಿಗೆ ಕಾದಂಬರಿಯಲ್ಲಿ ಮಲೆನಾಡಿನ ಜೀವನ ತನ್ನೆಲ್ಲ ಜಟಿಲತೆಗಳೊಂದಿಗೆ ದಟ್ಟವಾಗಿ "ಕಾನೂರು ಹೆಗ್ಗಡತಿ"ಯಲ್ಲಿ ಚಿತ್ರಿತವಾಗಿ ಬಂದಿದೆ.

"ವೃತ್ತದೊಳಗಿನ ವೃತ್ತವಾಗಿ ಸಾಗುವ ಕಥೆ ಅತ್ಯುತ್ತಮ ಕಾದಂಬರಿಗಳ ರೀತಿಯನ್ನು ನಿನಪಿಗೆ ತರುತ್ತದೆ. . . . . . .ಇದು ನಿಜಕ್ಕೂ ದಲಿತ ವರ್ಗದ ವಿಜಯ"[೧] ಎಂಬ ಪಿ.ಲಂಕೇಶರ ಮಾತು ಅರ್ಥಪೂರ್ಣ. ಇನ್ನು 'ಮಲೆಗಳಲ್ಲಿ ಮದುಮಗಳು' ಕಾದಂಬರಿಯೂ ಹಿಂದೂ ಧರ್ಮವನ್ನು ಸಂಪೂರ್ಣವಾಗಿ ತಿರಸ್ಕರಿಸುವುದಿಲ್ಲ. ಅದಕ್ಕೆ ಮೇಲ್ವರ್ಗದ ಜನಗಳ ಸ್ವಾರ್ಥದಿಂದ ಇಡೀ ಹಿಂದೂ ಸಮಾಜವೇ ಅವನತಿಯ ಮಾರ್ಗ ಹಿಡಿಯಲು ಕಾರಣವಾಗಿ, ಆ ಧರ್ಮದ ಉತ್ಕೃಷ್ಟ ಅಂಶಗಳು ಕೆಳವರ್ಗದವರಿಗೆ ತಲುಪಲಾರದೇ ಹೋಗಿವೆ. ಬಹುಶಃ ವಿವೇಕಾನಂದರಂಥವರ ಪ್ರಯತ್ನಗಳು, ಹಿಂದೂ ಧರ್ಮವನ್ನು ಅದರ ಅಧೋಗತಿಯಿಂದ ಪಾರುಮಾಡಬಹುದು ಎಂಬ ನಂಬಿಕೆ ಕಾದಂಬರಿಯ ಮುಖ್ಯಧೋರಣೆಗಳಲ್ಲಿ ಒಂದಾಗಿದೆ.

ಜೀವನವನ್ನು ಸಮಗ್ರವಾಗಿ ಸೃಷ್ಟಿ ಮಾಡುವ ಈ ಕಾದಂಬರಿಯು ಒಂದು ಸಾಮಾಜಿಕ ಸಂದರ್ಭದಲ್ಲಿ ಸಮಾಜದ ವಿವಿಧ ವರ್ಗಗಳು, ವಿರೋಧಾತ್ಮಕ ಸಂಬಂಧಗಳನ್ನು ಒಪ್ಪಿಸುತ್ತದೆ. ಕಾದಂಬರಿಯನ್ನು ಒಂದು ಕಲಾಕೃತಿ ಎಂದೇ ಪರಿಗಣಿಸಬೇಕಾಗುತ್ತದೆ. ಅಂದರೆ, ಅಲ್ಲಿ 'ವಿಚಾರ'ಗಳಾಗಲೀ, 'ಅನುಭವ'ಗಳಾಗಲೀ ಕಾದಂಬರಿ ಚಿತ್ರಿಸುವ ಜೀವನದ ಸಂದರ್ಭದಲ್ಲಿ ಹುಟ್ಟಿ ರೂಪುಗೊಂಡಿವೆಯೇ ಎನ್ನುವುದು ಮುಖ್ಯವಾಗಿ ಗಮನಿಸಬೇಕಾದ ಅಂಶ. ನಿಜ ಹಾಗೆ ರೂಪುಗೊಂಡಾಗ ಮಾತ್ರ ಅಲ್ಲಿ ಬರುವ ವಿಚಾರಗಳು, ಅನುಭವಗಳು ಮೌಲಿಕವಾದವುಗಳಾಗುತ್ತವೆ.

೧. ಪಿ.ಲಂಕೇಶ್, ಪ್ರಸ್ತುತ, ಪುಟ ೨೮

ಆದರೆ ರೂಪುಗೊಳ್ಳುವ ಕ್ರಿಯೆ ಒಂದೊಂದು ಕಾದಂಬರಿಯಲ್ಲಿ ಒಂದೊಂದು ತರಹದ್ದಿರಬಹುದು ಎನ್ನುವ ಅಂಶವನ್ನು ಮರೆಯುವಂತಿಲ್ಲ.

ನವೋದಯ ಸಾಹಿತ್ಯ ರಚನೆಯ ಕಾಲದಲ್ಲಿ ಬಹುಪಾಲು ಬ್ರಾಹ್ಮಣ ಲೇಖಕರೇ ಇದ್ದು ಅವರಲ್ಲಿ ಕುವೆಂಪು ಮಾತ್ರ ಬ್ರಾಹ್ಮಣೇತರರಾಗಿದ್ದರು. ಅವರೆಲ್ಲ ಕುವೆಂಪು ಅವರನ್ನು ಶೂದ್ರರನ್ನಾಗಿಯೇ ಕಾಣುತ್ತಿದ್ದು, ಆ ಕಾರಣಕ್ಕೆ ಅವರ ಸಾಹಿತ್ಯವನ್ನು ವಿನಾಕಾರಣ ಟೀಕೆಗೊಳಪಡಿಸಿದ್ದರೆಂಬುದು ಗುಟ್ಟಿನ ವಿಷಯವೇನಲ್ಲ. ಮೇಲುಜಾತಿಯ ಬಹುಪಾಲು ಲೇಖಕರು ತಮ್ಮನ್ನು ಶೂದ್ರನನ್ನಾಗಿ ಕಾಣುತ್ತಿದ್ದುದು ಕುವೆಂಪು ಅವರ ಗಮನಕ್ಕೂ ಬಂದಿತ್ತು. ಇದರಿಂದ ಅವರು ವಿಚಲಿತರಾಗದೆ ಶೂದ್ರ ನೆಲೆಯಿಂದಲೇ ಬದುಕನ್ನು ಅರ್ಥೈಸುವುದಕ್ಕೆ ಪ್ರಯತ್ನಿಸಿದರು. ಕುವೆಂಪು ಅವರ ಸೃಜನಶೀಲತೆ ಗರಿಗೆದರಲು ಶೂದ್ರಪ್ರಜ್ಞೆ ಮತ್ತು ಶೂದ್ರಾನುಭವಗಳೇ ಅದಕ್ಕೆ ಮುಖ್ಯಪ್ರೇರಣೆಗಳಾದವು.

ಇದರಿಂದಾಗಿಯೇ ಕುವೆಂಪು ಸಾಹಿತ್ಯ ರಚನೆಯಲ್ಲಿ ವಿಭಿನ್ನ ಹಾದಿಯನ್ನು ಹುಡುಕಿಕೊಂಡರು. ರಾಮಾಯಣದಲ್ಲಿ ಶೂದ್ರಸಂಭೂತನಿಗೊದಗಿದ ದುಸ್ಥಿತಿಯನ್ನು ಅರಿತು ಅದರಿಂದ ಶೂದ್ರ ಸಮುದಾಯಗಳ ಮೇಲೆ ಒದಗಬಹುದಾದ ದುಷ್ಪರಿಣಾಮಗಳನ್ನು ನಿವಾರಿಸಲೆಂಬಂತೆ 'ಶೂದ್ರತಪಸ್ವಿ' ಎಂಬ ನಾಟಕವನ್ನು ರಚಿಸಿದರು. ಇವೇ ಉದ್ದೇಶಗಳ ಮುಂದುವರಿಕೆಯಾಗಿ ಏಕಲವ್ಯನನ್ನು ಕುರಿತ 'ಬೆರಳ್-ಗೆ-ಕೊರಳ್' ಎಂಬ ನಾಟಕವನ್ನು ರಚಿಸಿದರು. ಆ ಮೂಲಕ ಇತಿಹಾಸ ಮತ್ತು ಪುರಾಣಗಳ ಕಥಾವಸ್ತುವನ್ನು ಆಧುನಿಕ ವಿಚಾರಗಳ ಹಿನ್ನೆಲೆಯಲ್ಲಿ ಪುನರ್‌ಸೃಷ್ಟಿಸುವ ಪ್ರಯತ್ನ ಮಾಡಿದರು. ಅವರ ಕಾವ್ಯ, ಕಥೆ, ಕಾದಂಬರಿಗಳನ್ನು ತೆಗೆದುಕೊಂಡರೆ ಇದೇ ಬಗೆಯ ಧೋರಣೆಗಳನ್ನು ಅಲ್ಲಿಯೂ ಗುರುತಿಸಲು ಸಾಧ್ಯ.

ಜೀವನವನ್ನು ವ್ಯಾಪಕವಾಗಿ ಅದರ ಎಲ್ಲಾ ಸಂಕೀರ್ಣತೆ, ಜಟಿಲತೆಗಳೊಂದಿಗೆ ಅನುಪಮವಾಗಿ ವಿವರ ವಿವರವಾಗಿ ಚಿತ್ರಿಸುವ ಈ ಕಾದಂಬರಿ ಪರೋಕ್ಷವಾಗಿ ತನ್ನ ಜೀವನವನ್ನು ಕುರಿತಾದ ಧೋರಣೆಯನ್ನು ಬಿಟ್ಟುಕೊಡುತ್ತದೆ, ಮೌಲ್ಯವಿವೇಚನೆ ಮಾಡುತ್ತದೆ.

ದಲಿತ ವರ್ಗದ ವಿಜಯ ಎಂಬ ಲಂಕೇಶರ ಮಾತುಗಳು ಕನ್ನಡದಲ್ಲಿ ಪ್ರಪ್ರಥಮ ಬಾರಿಗೆ, ಒಬ್ಬ ದಲಿತ ವರ್ಗದ ಗುತ್ತಿಯಂಥ ಪಾತ್ರವನ್ನು ಐತ-ಪೀಂಚಲುಗಳಂತಹ ಪಾತ್ರಗಳನ್ನು ಸಮಾಜದ ಮಧ್ಯದಲ್ಲಿನ ಅವರ ವಸ್ತುಸ್ಥಿತಿಯನ್ನು ಚಿತ್ರಿಸುತ್ತಲೇ ಮಾನವೀಯ ದೃಷ್ಟಿಯಿಂದಲೂ ರೂಪಿಸುವ 'ಮಲೆಗಳಲ್ಲಿ ಮದುಮಗಳು' ಕಾದಂಬರಿಗೆ ಇದು ಅರ್ಥಪೂರ್ಣವಾಗಿ ಅನ್ವಯಿಸುತ್ತದೆ. ಈ ಎರಡು

ಕಾದಂಬರಿಗಳು ಕೇವಲ ಒಂದು ಸಾಮಾಜಿಕ ಸಂದರ್ಭದ ವಸ್ತುಸ್ಥಿತಿಯನ್ನು ಚಿತ್ರಿಸುವುದರ ಜೊತೆಗೆ ಆ ಸ್ಥಿತಿಯನ್ನು ಮೀರಿ ಭವಿಷ್ಯವನ್ನು ಕಾಣುವ ಧೋರಣೆ ಉಳ್ಳವೂ ಆಗಿವೆ.

**ಮಲೆಗಳಲ್ಲಿ ಮದುಮಗಳು:**

'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಕಂಡುಬರುವ ಸಮೃದ್ಧ ಜೀವನಾನುಭವ ಬೆರಗುಹುಟ್ಟಿಸುವಂಥದ್ದು. ಕುವೆಂಪು ಅವರ ಸೂಕ್ಷ್ಮನಿರೀಕ್ಷಣಾ ಶಕ್ತಿ ಹಾಗೂ ಜೀವಂತ ಸನ್ನಿವೇಶ ಸೃಷ್ಟಿಯ ಮೂಲಕ ಮಲೆನಾಡಿನ ಬದುಕು ತನ್ನೆಲ್ಲ ಸೊಗಡಿನೊಂದಿಗೆ ಈ ಕಾದಂಬರಿಯಲ್ಲಿ ಮೈತಾಳಿದೆ. ಅಲ್ಲಿನ ಬದುಕಿನ ಸಂಕೀರ್ಣತೆ, ವೈವಿಧ್ಯತೆ ಹಾಗೂ ಸಾಧ್ಯತೆಗಳೆಲ್ಲವನ್ನೂ ಕುವೆಂಪು ಅವರು ಈ ಕಾದಂಬರಿಯ ವಿವರವಿವರಗಳಲ್ಲಿ ಮೂಡಿಸಲು ಪ್ರಯತ್ನಿಸಿದ್ದಾರೆ. ಆ ಪ್ರಯತ್ನದಲ್ಲಿ ಅವರು ಯಶಸ್ವಿಯೂ ಆಗಿದ್ದಾರೆ. ಪರಿಸರದ ದಟ್ಟವಾದ ಚಿತ್ರಣ ಕನ್ನಡ ಕಾದಂಬರಿಗಳಲ್ಲೇ ಈ ಮಟ್ಟದಲ್ಲಿ ವಿರಳವೆನ್ನುವಷ್ಟರ ಮಟ್ಟಿಗೆ ಸಜೀವವಾಗಿ ಮೂಡಿಬಂದಿದೆ.

ಅಲ್ಲಿನ ಜೀವನ ವಿಧಾನ ನೀತಿ–ಅನೀತಿಗಳ ಕಲ್ಪನೆ, ಆರ್ಥಿಕ ಸ್ಥಿತಿಗತಿ, ಸಾಮಾಜಿಕ ಸಂಬಂಧ, ಪ್ರಕೃತಿ ಸವಾಲುಗಳು – ಈ ಎಲ್ಲವನ್ನೂ ಕುವೆಂಪು ಅವರು ಉಸಿರಾಟದಷ್ಟು ಸಹಜವಾಗಿ ಚಿತ್ರಿಸಿದ್ದಾರೆ. ಒಂದು ರೀತಿಯಲ್ಲಿ 'ಮಲೆಗಳಲ್ಲಿ ಮದುಮಗಳು' ಮಲೆನಾಡಿನ ಬದುಕಿನ ಒಂದು ಸಾಂಸ್ಕೃತಿಕ ದಾಖಲೆಯೆನ್ನಬಹುದು.

ಈಗಾಗಲೇ ವಿಮರ್ಶಕರು ಗುರುತಿಸಿರುವಂತೆ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಪ್ರಾಮುಖ್ಯತೆ ಪಡೆದುಕೊಂಡಿರುವುದು ಗಂಡು–ಹೆಣ್ಣುಗಳ ಸಂಬಂಧದ ಚಿತ್ರಣ. ಈ ಗಂಡು–ಹೆಣ್ಣಿನ ಸಂಬಂಧಗಳ ಚಿತ್ರಣದಲ್ಲಿ ಮುಖ್ಯವಾಗಿ ಮೂರು ಸಂಬಂಧಗಳು ಥಟ್ಟನೆ ಗಮನ ಸೆಳೆಯುತ್ತವೆ. ಅವು ನಾಯಿಗುತ್ತಿ ಮತ್ತು ತಿಮ್ಮ, ಐತ ಮತ್ತು ಪೀಂಚಲು, ಮುಕುಂದಯ್ಯ ಮತ್ತು ಚಿನ್ನಮ್ಮ ಇವುಗಳಲ್ಲಿ ಸಾಮಾಜಿಕ ಕಟ್ಟುಕಟ್ಟಳೆಗಳ ಮೇರೆ ಮೀರಿದೆ. ತೃಪ್ತಿಕರ ಬದುಕು ನಡೆಸುವಂತೆ ದಾಂಪತ್ಯ ಜೀವನವನ್ನು ಕುವೆಂಪುರವರು ದಲಿತ ವರ್ಗದವರಾದ ಐತ ಮತ್ತು ಪೀಂಚಲು ಜೋಡಿಯಲ್ಲಿ ಮಿಳಿತಗೊಳಿಸಿದ್ದಾರೆ. ಮೇಲ್ನೋಟಕ್ಕೆ ಗುತ್ತಿ ಮತ್ತು ತಿಮ್ಮಿ ಹಾಗೂ ಚಿನ್ನಮ್ಮ ಮತ್ತು ಮುಕುಂದಯ್ಯ ಇವರ ಬದುಕಿನಲ್ಲಿ ಕಥೆಯ ಮಟ್ಟದಲ್ಲೇ ಕೆಲವು ಹೋಲಿಕೆಗಳಿವೆ. ಇಲ್ಲಿ ಗುತ್ತಿ ಮತ್ತು ಮುಕುಂದಯ್ಯ ತಾವು ಪ್ರೀತಿಸಿದ ಹುಡುಗಿಯನ್ನು ಪಡೆಯಲು ಅನುಸರಿಸುವ ಮಾರ್ಗ ಒಂದೇ ಆದರೂ ಅವರ ಹೋರಾಟದ ಹಿನ್ನೆಲೆಯಲ್ಲಿ ಕೆಲಸ ಮಾಡುವ ಶಕ್ತಿ ಮಾತ್ರ ಮೂಲತಃ ಭಿನ್ನವಾದುದರಿಂದ ಗುತ್ತಿಯ ಸಮಸ್ಯೆ ಮುಕುಂದಯ್ಯನ ಸಮಸ್ಯೆಗಿಂತ ಭಿನ್ನ ಹಾಗೂ ಸಂಕೀರ್ಣವಾದುದು.

"ಒಡೆಯರಿಗೆ ಬೇಕಾಗಿದ್ದುದು ಜೀತ ಮಾಡಲು ಒಂದು ಆಳು, ತಮ್ಮ ಹೊಲೆಗೇರಿಯ ಒಂದು ಹೆಣ್ಣನ್ನು ಹೊರಗೆ ಕೊಟ್ಟರೆ ತಮ್ಮ ಕೆಲಸಕ್ಕೆ ಬಂದಾಳು, ಕೋತ ಬೀಳುತ್ತದೆ, ಆದ್ದರಿಂದ ಕೇರಿಯ ಹೆಣ್ಣನ್ನು ಕೇರಿಯ ಗಂಡೇ ಮದುವೆಯಾಗಬೇಕು ಎಂಬುದು ಅವರ ಕಟ್ಟಪ್ಪಣೆ. ಬೇರೆ ರೀತಿಯಿಂದ ವರ್ತಿಸಿದರೆ, ಆ ಹೆಣ್ಣು ಇನ್ನೊಬ್ಬ ಬೇರೆ ಹಳ್ಳಿಯ ಕೇರಿಯವನಿಂದ ತಾಳಿ ಕಟ್ಟಿಸಿಕೊಂಡಿದ್ದರೂ ಸರಿ, ಅವಳನ್ನು ಎಳೆದು ತರಿಸಿ ತಾಳಿ ಕೀಳಿಸಿ ತಮ್ಮ ಕೇರಿಯವನಿಗೆ ಮದುವೆ ಮಾಡಿಸುತ್ತಿದ್ದರೆಂಬುದರಲ್ಲಿ ಸಂದೇಹವಿಲ್ಲ. ಅಪ್ಪಿತಪ್ಪಿ ಒಡೆಯರ ಇಚ್ಛೆಗೆ ವಿರೋಧವಾಗಿ ನಡೆದವರಿಗೆ ಹಿಂದೆ ಅಂತಹ ಗತಿಯೇ ಒದಗಿತ್ತು. ಕೀಳುಜಾತಿಯವರಿಗೆ ಅವರ ಇಚ್ಛಾನುಸಾರ ಒಲವು, ಅಕ್ಕರೆ ಇರುವುದೆಂದರೇನು? ಒಲವು, ಅಕ್ಕರೆ ಏನಿದ್ದರೂ ಎಲ್ಲ ಒಡೆಯರ ಲಾಭದ ವಲಯದೊಳಗಿದ್ದು, ಅವರ ಇಚ್ಛಾಧೀನವಾಗಿರಬೇಕು. ಅವರ ಆಜ್ಞೆಯ ಗೆರೆ ದಾಟುವಂತಿರಲಿಲ್ಲ"[೧]. ಇಲ್ಲಿ ಕಂಡುಬರುವ ಚಿತ್ರಣ ಮೇಲ್ವರ್ಗದವರ ದಬ್ಬಾಳಿಕೆ ಮತ್ತು ದಲಿತರ ಭಯದ ಬದುಕನ್ನು ಹೇಳುವ ವಾಸ್ತವಸತ್ಯವಾಗಿದೆ. ಇಲ್ಲಿ ಕುವೆಂಪುರವರು ದಲಿತಪರವಾದಂತಹ ಚಿಂತನೆಯನ್ನು ಓದುಗರ ಮನಸ್ಸಿನಲ್ಲಿ ಮೂಡುವಂತೆ ಚಿತ್ರಿಸಿದ್ದಾರೆ.

ದಲಿತ ಜೀವನದ ಕಷ್ಟಗಳ ಬಗ್ಗೆ ಗುತ್ತಿಗೆ ಅನ್ನಿಸುವುದು "ನಾನು ಹೋಲೇರವನಲ್ಲದೆ ಬ್ಯಾರೆ ಜಾತಿಗೆ ಸೇರಿದವನಾಗಿದ್ದರೆ ಹಿಂಗಾಗ್ತಿತ್ತೆ?" ಎಂಬ ಗುತ್ತಿಯ ಈ ಪ್ರಶ್ನೆ ಆತನ ವೈಯುಕ್ತಿಕ ಪ್ರಶ್ನೆ ಮಾತ್ರವಲ್ಲ, ಕಾದಂಬರಿ ಕೇಂದ್ರ ಪ್ರಶ್ನೆ ಅನಿಸುತ್ತದೆ.

ಕುವೆಂಪು ಅವರು ತಮ್ಮ ಕಾದಂಬರಿಗಳಲ್ಲಿ ದಲಿತರನ್ನು ಚಿತ್ರಿಸಿರುವ ಬಗೆಗೆ ಬಿ.ಕೃಷ್ಣಪ್ಪನವರು ಆಕ್ಷೇಪಣೆಗಳನ್ನು ಎತ್ತಿದ್ದಾರೆ. ಇವರ ಪ್ರಕಾರ "ಕುವೆಂಪು ತಮ್ಮ ಕಾದಂಬರಿಗಳಲ್ಲಿ ದಲಿತರ ಪರಿಸ್ಥಿತಿಗಳನ್ನು ವರ್ಣಿಸುತ್ತಾರಾದರೂ ಅವರ ಅಂತಃಕರಣವೆಲ್ಲ ಊಳಿಗಮಾನ್ಯ ಜಮೀನುದಾರರ, ಗೌಡರ ಪರವಾಗಿದ್ದು ಬ್ರಾಹ್ಮಣ ವಿರೋಧಿಯಾಗಿದೆಯೇ ಹೊರತು ದಲಿತ ಪರವಾಗಿಲ್ಲ ಎಂದಿದ್ದಾರೆ"[೨] ಈ ವಾದದ ಸಮರ್ಥನೆಗಾಗಿ ಕಾದಂಬರಿಗಳಿಂದ ಕೆಲವು ಪ್ರಸಂಗಗಳನ್ನು ಎತ್ತಿ ಕೊಟ್ಟಿದ್ದಾರೆ.

"ಇಜಾರದ ಸಾಬು ತನ್ನ ಕೈಯಿಂದ ಉಗ್ರ ಸನ್ನೆ ಮಾಡಿ ತಲೆಯಾಡಿಸಿ ಕರೆದೊಡನೆಯೇ ಗಾಡಿಯ ನೊಗಕ್ಕೆ ಹೆಗಲು ಕೊಟ್ಟು ಅಭ್ಯಾಸವಿದ್ದ ಗಾಡಿಯೆತ್ತು, ಗಾಡಿ ಹೊಡೆಯುವವನು ಮೂಗಿಗೆ ಕೈಹಾಕಿ ಲೊಚಗುಟ್ಟಿದೊಡನೆಯೇ ನೊಗಕ್ಕೆ ವಿಧೇಯತೆಯಿಂದ ಹೆಗಲು ಕೊಡುವಂತೆ ಸಣ್ಣಬೀರ ನಡುನಡುಗುತ್ತಲೇ ನಾಲಗೆ ಬಿದ್ದುಹೋಗಿ ಮಾತು ಸತ್ತವನಂತೆ, ಮೂಕ ಪಶುವಿನಂತೆ, ಒಮ್ಮೆ ಕೆರಳಿ ಕುಳಿತಿದ್ದ ಗೌಡರನ್ನು, ಒಮ್ಮೆ ದುಃಖಾಧೀನನಾಗಿ ಪರಿತಪಿಸುತ್ತಿದ್ದ ತನ್ನ ತಂದೆಯನ್ನು ನೋಡುತ್ತ ಶಿಕ್ಷಾಸ್ತಂಭದ ಕಡೆ ಮುಂದುವರಿದನು. ಅವನು ಹೋದ ರೀತಿ, ಕಂಭವನ್ನು ತಬ್ಬಿ ನಿಂತ ರೀತಿ, ಎರಡೂ ಕೈಗಳನ್ನು ಜೋಡಿಸಿ ಹಗ್ಗ ಬಿಗಿಸಿಕೊಂಡ ರೀತಿ ಹೇಗಿತ್ತು ಎಂದರೆ ಆ ಯೂಪಸ್ತಂಭಕ್ಕೆ ಬಲಿ

೧. ಮಲೆಗಳಲ್ಲಿ ಮದುಮಗಳು, ಪುಟ ೧೬೭

೨. ಕೃಷ್ಣಪ್ಪ.ಬಿ., ಕುವೆಂಪು ಕಾದಂಬರಿಗಳಲ್ಲಿ ದಲಿತ ಚಿತ್ರಣ, ಶ್ರೀ ಕುವೆಂಪು (ಸಂ) ಜಿ.ಎಸ್.ಶಿವರುದ್ರಪ್ಪ, ಪ್ರಸಾರಾಂಗ, ಬೆಂ.ವಿ.ವಿ., ಬೆಂಗಳೂರು, ೧೯೯೧, ಪುಟ ೧೧೯

ಕಟ್ಟಿಸಿಕೊಳ್ಳುವ ಯಜ್ಞವಿಧಾನ ಅವನಿಗೆ ಪೂರ್ವಪರಿಚಿತವಾದದ್ದು ಎಂಬುದು ಚೆನ್ನಾಗಿ ಗೊತ್ತಾಗುವಂತಿತ್ತು. ತಾನು ಮಾತ್ರವಲ್ಲದೆ, ಇತರ ಅಪರಾಧಿಗಳೂ ಗೌಡರ ಕ್ರೋಧಕ್ಕೆ ಪಾತ್ರರಾಗಿ ಆ ಯೂಪಸ್ತಂಭಕ್ಕೆ ಯಜ್ಞಪಶುಗಳಾಗಿದ್ದುದನ್ನು ಅವನು ಹಿಂದೆ ಎಷ್ಟೋ ಸಾರಿ ಕಂಡೂ ಇದ್ದನು, ಅನುಭವಿಸಿಯೂ ಇದ್ದನು. ಆಜ್ಞೆಯಾದೊಡನೆಯೇ ಹೋಗಿ ನೊಗಕ್ಕೆ ಹೆಗಲುಕೊಡುವಂತೆ ಕಂಬವನ್ನು ತಬ್ಬಿನಿಂತು ಕೈಕಟ್ಟಿಸಿಕೊಳ್ಳಲು ಒಪ್ಪದೆ ಪ್ರತಿಭಟಿಸಿದವರಿಗೆ ಏನು ಶಿಕ್ಷೆ ಒದಗುತ್ತಿತ್ತು ಎಂಬುದು ಅವನಿಗೆ ಗೊತ್ತಿದ್ದ ವಿಷಯವೇ ಆಗಿತ್ತು. ಆದ್ದರಿಂದಲೇ ಅವನು ಚಕಾರವೆತ್ತದೆ ಬೇಗ ಬೇಗ ಕಂಬವನ್ನಪ್ಪಿ ಕಟ್ಟಿಸಿಕೊಂಡದ್ದು"[೧]

ಆದರೆ ಕುವೆಂಪು ಅವರು ಸಣ್ಣಬೀರನಿಗೆ 'ಹೊನ್ನಳ್ಳಿಹೊಡ್ತ' ಕೊಡಿಸಿದಾಗ ಮಗನ ಮೇಲೆ ಆದ ಹಿಂಸೆಯನ್ನು ಯಾವ ತಾಯಿಯೂ ಕಣ್ಣಾರೆ ನೋಡಿ ಸುಮ್ಮನಿರಲಾರಳು ಎಂಬುದನ್ನು ಕುವೆಂಪು ಸೇಸಿಯ ಮುಖಾಂತರ ಸಮರ್ಥಿಸಿದ್ದಾರೆ. ಸೇಸಿಯಂತಹ ಕೆಳವರ್ಗದ ಹೆಣ್ಣುಮಗಳನ್ನು ನಿದರ್ಶನವಾಗಿರಿಸಿಕೊಂಡು ಹೇಳಿರುವುದು ನಿಜಕ್ಕೂ ಮಹತ್ವದ ಕಲ್ಪನೆಯೇ ಸರಿ. ಇಂತಹ ಸಂದರ್ಭದಲ್ಲಿ ಧಣಿಯರಿಗೆ ಎದುರು ಮಾತನಾಡುವುದು ಗಂಡಸರಿಗೂ ಸಾಧ್ಯವಿಲ್ಲದಿರುವಾಗ ಸೇಸಿ ಓಡಿಬಂದು ಇಜಾರಸಾಬನ ಕೈಯಲ್ಲಿದ್ದ ಬರಲನ್ನು ಕಸಿದು ಎಸೆದು ಗೌಡರಿಗೆ "ನನ್ನನ್ನು ಬೇಕಾದರೆ ಕೊಂದು ಹಾಕಿ, ನನ್ನ ಗಂಡುಮಕ್ಕಳನ್ನು ಕೊಲ್ಲಬೇಡಿ" ಎಂದು ಅಡ್ಡಬೀಳುತ್ತಾಳೆ. ಮುಂದುವರೆದು ಕುವೆಂಪು ಅವರು ಈ ತಾಯ್ತನದ ಶಕ್ತಿಯ ಬಗೆಗೆ "ನಾವು ನಂಬಲಿ, ಬಿಡಲಿ, ಹೆತ್ತ ಹೊಟ್ಟೆ ಉರಿದು ಕೊಟ್ಟ ಶಾಪ ತಟ್ಟದೇ ಬಿಡ್ತದೆಯೇ ಇಂದಲ್ಲನಾಳೆ" ಎಂದು ಭಾಷ್ಯ ನುಡಿಯುತ್ತಾರೆ. ಇಡೀ ಪ್ರಸಂಗವೇ ಜೀತದಾಳೊಬ್ಬನ ಮೇಲೆ ಆಳುವ ವರ್ಗ ನಡೆಸುವ ಹಲ್ಲೆಗೆ ಪ್ರತಿಭಟನೆ ಎಂಬಂತೆ ಚಿತ್ರಣಗೊಂಡಿರುವುದು ಗಮನಾರ್ಹವಾಗಿದೆ.

ಇಲ್ಲಿನ ಪ್ರತಿಯೊಂದು ಪಾತ್ರಗಳಿಗೂ ಮಾನವಸಹಜವಾದ ಸ್ವಾತಂತ್ರ್ಯದ ಹಂಬಲವಿದೆ. ಅದಕ್ಕಾಗಿಯೇ ಅವು ತಮ್ಮ ಮಿತಿಯಲ್ಲಿಯೇ ಹೋರಾಟವನ್ನೂ ನಡೆಸುತ್ತವೆ. ಇಂಥ ಹೋರಾಟದ ಪ್ರಮುಖ ಪ್ರತಿನಿಧಿ ನಾಯಿಗುತ್ತಿ, ಇವನ ಇಡೀ ಬದುಕು ಇಂಥ ಹೋರಾಟದ ಬದುಕೇ ಆಗಿದೆ. ಕಡೆಗೆ ಅದರಲ್ಲಿ ಆತ ಸೋಲುವುದು ಒಂದು ಸಾಮಾಜಿಕ ದುರಂತ. ಆದರೆ ಆ ದುರಂತದ ಹಿಂದಿನ ಹೋರಾಟ ಅರ್ಥಪೂರ್ಣವಾದುದು. ಈ ಹೋರಾಟದಲ್ಲಿ ಗುತ್ತಿ ಅನೇಕ ನೆಲೆಗಳಲ್ಲಿ ಒಪ್ಪಂದಗಳನ್ನು ಮಾಡಿಕೊಳ್ಳಬೇಕಾಗುತ್ತದೆಂಬುದು ವಾಸ್ತವವಾದರೂ ಅದೆಲ್ಲವನ್ನೂ ಮೀರಿ ಆತನ ಚೇತನ ಕ್ರಿಯಾತ್ಮಕವಾಗಿತ್ತು ಎನ್ನುವುದು ಬಹಳ ಮುಖ್ಯವಾದ ಸಂಗತಿ. ಆದ್ದರಿಂದ 'ಮಲೆಗಳಲ್ಲಿ ಮದುಮಗಳು' ಕಾದಂಬರಿ ತನ್ನ ಆಶ್ರಯದಲ್ಲಿ ಮನುಷ್ಯಚೇತನದ ಸಹಜ ಸ್ವಾತಂತ್ರ್ಯದ ಅಪೇಕ್ಷೆಯನ್ನು

೧. ಮಲೆಗಳಲ್ಲಿ ಮದುಮಗಳು, ಪುಟ ೧೬೭

ಪ್ರಕಟಿಸುತ್ತಾದರೂ ಕಾದಂಬರಿಯ ಶಿಲ್ಪದಲ್ಲಿ ಇದು ಗೌಣವಾಗಿ ಬರುತ್ತದೆ ಅಥವಾ ಅಮುಖ್ಯವಾಗಿ ಬಿಡುತ್ತದೆ.

"ಕಾದಂಬರಿಯ ಆಶಯದ ದೃಷ್ಟಿಯಿಂದ ಗುತ್ತಿ ಕಾದಂಬರಿಯ ಪ್ರಮುಖ ಪಾತ್ರವಾದರೆ ಕಾದಂಬರಿ ರಚನಾ ವಿಧಾನದಲ್ಲಿ ಮುಕುಂದಯ್ಯ ಮುಖ್ಯವಾಗಿಬಿಡುತ್ತಾನೆ. ಕಲಾವಿದರಾದ ಕುವೆಂಪು ನಾಯಿಗುತ್ತಿಯನ್ನು ಕೇಂದ್ರಪಾತ್ರವನ್ನಾಗಿ ಗುರ್ತಿಸಿಕೊಂಡರೆ, ಚಿಂತಕ ಕುವೆಂಪು ಮುಕುಂದಯ್ಯನನ್ನು ಮುಖ್ಯವಾಗಿ ಪರಿಗಣಿಸುತ್ತಾರೆ. ಹೀಗಾಗಿ ಕಾದಂಬರಿಯ ಆಶಯ ಹಾಗೂ ಶಿಲ್ಪದ ನಡುವೆ ಹೊಂದಾಣಿಕೆಯಿಲ್ಲದಿರುವುದರಿಂದ ಮಹತ್ವಾಕಾಂಕ್ಷೆಯ 'ಮಲೆಗಳಲ್ಲಿ ಮದುಮಗಳು' ಕಲಾಕೃತಿಯಾಗಿ ಸೋಲುತ್ತದೆ"[೧] ಎಂಬ ನರಹಳ್ಳಿ ಬಾಲಸುಬ್ರಮಣ್ಯಂ ಅವರ ಮಾತು, ಅವರು ನೀಡುವ ಸಮಜಾಯಿಷಿಯಲ್ಲಿ ಹೆಚ್ಚು ಸತ್ಯ ಇರುವಂತೆ ಕಂಡುಬರುತ್ತದೆ. ಆದರೆ ಕುವೆಂಪು ಮೊದಲೇ ಹೇಳುವಂತೆ 'ಇಲ್ಲಿ ಯಾರೂ ಮುಖ್ಯವಲ್ಲ' ಎಂಬುದರಿಂದಲೋ ಏನೋ ಈ ರೀತಿಯ ವರ್ಣನೆಯು ಕಂಡುಬಂದು ಒಂದು ಕೇಂದ್ರ ಪಾತ್ರವನ್ನು ಇಟ್ಟು ರಚನೆ ಮಾಡಲು ಮೊದಲು ಹೊರಟಿದ್ದರೆ ನಾಯಿಗುತ್ತಿಯ ಪರವಾದ ಅಥವಾ ಮುಕುಂದಯ್ಯನ ಪರವಾದ ನಿಲುವನ್ನು ಪಡೆದು ನಾಯಕನನ್ನಾಗಿ ಮಾಡುತ್ತಿದ್ದರೇನೋ, ಏನೇ ಇರಲಿ ವಿಮರ್ಶಕರು ಈಗಾಗಲೇ ಗುರುತಿಸಿರುವುದು ಕುವೆಂಪುರವರು ಜಮೀನ್ದಾರರ, ಗೌಡರ ಪರವಾಗಿದ್ದ ಮನಸ್ಸುಳ್ಳವರಾಗಿದ್ದು, ಬ್ರಾಹ್ಮಣರನ್ನು ವಿರೋಧಿಸುವ, ದಲಿತರ ಪರವಾಗಿಲ್ಲದ ನಿಲುವನ್ನು ಹೊಂದಿದ್ದಾರೆ ಎಂದೇ ಹೇಳಬಹುದೇನೂ?



ತಿಮ್ಮಿಯನ್ನು ಕರೆತರಲು ಹೊರಟ ಗುತ್ತಿಯ ಸಾಹಸಯಾತ್ರೆಯಿಂದ ಆರಂಭವಾದ ಕಾದಂಬರಿ, ಮುಕುಂದಯ್ಯ-ಚಿನ್ನಮ್ಮರ ವಿವಾಹಪ್ರಸ್ತಾಪದೊಡನೆ ಮುಗಿಯುವುದು ಕಾದಂಬರಿಯ ಶೀರ್ಷಿಕೆಯನ್ನು ಸಾರ್ಥಕ್ಯಗೊಳಿಸುವುದಲ್ಲದೆ, ಕಥನ ಐಕ್ಯವನ್ನು ಸಾಧಿಸುತ್ತದೆ. ಹೀಗೆ ರಚನಾ ವಿಧಾನ, ವಸ್ತುವಿನ್ಯಾಸಕ್ಕೆ ಕಾರಣವಾಗುವುದು ಮಾತ್ರವಲ್ಲದೆ ಅದರ ಶಕ್ತಿಸಾಹಿತ್ಯಕ ಅಭಿವ್ಯಕ್ತಿಗೂ ಸಹಾಯಕವಾಗುತ್ತದೆ. ಒಟ್ಟಿನಲ್ಲಿ 'ಮಲೆಗಳಲ್ಲಿ ಮದುಮಗಳು' ಒಂದು ಸಾಹಿತ್ಯಿಕವಾದ ಮಹತ್ವದ ಕಾದಂಬರಿ ಎಂಬುದನ್ನು ಮರೆಯುವಂತಿಲ್ಲ.

ಒಂದು ಮಹತ್ವಪೂರ್ಣ ಸಾಹಿತ್ಯಕೃತಿ ತನ್ನನ್ನು ಅಳೆಯಲು ಬೇಕಾದ ಮಾನದಂಡಗಳನ್ನು ತಾನೇ ಒದಗಿಸಿಕೊಡುತ್ತದೆ ಎಂಬ ವಿಮರ್ಶೆಯ ಮೂಲಸೂತ್ರವನ್ನು ಮರೆತು ಇಂಥ ಮಹತ್ವಪೂರ್ಣ ಕಾದಂಬರಿಗಳ ಬಗೆಗೆ "ವಿವರಗಳಲ್ಲಿ ಸೊಕ್ಕಿಬಿಡುತ್ತದೆ"[೨] ಎಂದಾಗಲೀ, ಕೇಂದ್ರಪ್ರಜ್ಞೆಯಿಲ್ಲವೆಂದಾಗಲೀ ಅವುಗಳ ಮಹತ್ವವನ್ನು ಅಲ್ಲಗಳೆಯುವುದು ಸರಿಯಾದ ವಿಮರ್ಶೆಯಲ್ಲ.



೧. ಅನುಸಂಧಾನ, ನರಹಳ್ಳಿ ಬಾಲಸುಬ್ರಮಣ್ಯಂ, ೧೯೮೧, ಪುಟ ೩೯
೨. ಡಾ.ಯು.ಆರ್.ಅನಂತಮೂರ್ತಿ, ಪ್ರಜ್ಞೆ ಮತ್ತು ಪರಿಸರ, ಪುಟ ೧೬೮

**ಕಾನೂರು ಹೆಗ್ಗಡತಿ:**

'ಕಾನೂರು ಹೆಗ್ಗಡತಿ' ಗ್ರಾಮೀಣ ಬದುಕಿನ ಸಂಘರ್ಷ, ಸಂಕೀರ್ಣತೆಯನ್ನು ಒಳಗೊಂಡ ಕೃತಿ. ಕೃತಿ ಆರಂಭವಾಗುವುದು ಜಡಗೊಂಡ ವ್ಯವಸ್ಥೆಗೆ ಹೊಸ ಚೇತನ ಹೊತ್ತು ತರುವುದರೊಂದಿಗೆ ಸಮೃದ್ಧ ಪ್ರಕೃತಿ, ಪುರೋಹಿತಶಾಹಿಯ ನಿರ್ದೇಶನದ ವ್ಯವಸ್ಥೆ, ಜಮೀನ್ದಾರಿಕೆಯ ದರ್ಪ, ಅಮಾನವೀಯ ಕ್ರೌರ್ಯ – ಈ ಎಲ್ಲವುಗಳನ್ನು ಕಾನೂರಿನ ಬದುಕಾಗಿ ಚಿತ್ರಿಸುತ್ತಾರೆ. ಜನಸಾಮಾನ್ಯರ ಬದುಕು ಈ ನೆಲೆಯಲ್ಲಿ ಅತ್ಯಂತ ಹೀನವಾಗಿದ್ದು, ಯಾವುದೇ ಆಸೆ, ನಿರೀಕ್ಷೆಗಳಿಲ್ಲದಂತಾಗಿರುತ್ತದೆ. "ಪ್ರಕೃತಿಯೊಂದಿಗೆ ನಿರಂತರ ಸೆಣಸಾಡಿ ಬಡತನ, ಅಜ್ಞಾನ, ಮೂಢನಂಬಿಕೆ, ಅನಾಚಾರ, ಸಣ್ಣತನ, ದಬ್ಬಾಳಿ ಇತ್ಯಾದಿಗಳನ್ನು ತಮ್ಮ ಜೀವನದ ಅನಿವಾರ್ಯ ಅಂಶಗಳೆಂದೇ ನಂಬಿಕೊಂಡಿದ್ದ ಮಲೆನಾಡಿನ ಜಾನಪದ ಜಗತ್ತಿಗೆ ಸುಸಂಸ್ಕೃತನೂ, ವಿದ್ಯಾವಂತರೂ, ಭಾವಜೀವಿಯೂ ಆಗಿದ್ದ ಸಜ್ಜಯ ಹೂವಯ್ಯ ಪ್ರವೇಶಿಸಿದ್ದು, ಆ ಪ್ರಾಂತ್ಯದ ಬದುಕಿನ ದಿಕ್ಕನ್ನೇ ಬದಲಾಯಿಸಲು ಮೊದಲಾದ ಪ್ರಗತಿ ಪ್ರವೇಶಿಕ"[೧] ಎನ್ನುತ್ತಾರೆ ನಂ. ತಪಸ್ವೀಕುಮಾರ್.

ಸಮಗ್ರ ಭಾರತೀಯ ಪರಂಪರೆಯೊಂದಿಗೆ ಸಮಕಾಲೀನ ರಾಷ್ಟ್ರೀಯ ಚಿಂತನೆಗಳು, ಪಾಶ್ಚಾತ್ಯ ತಾತ್ವಿಕಜ್ಞಾನದ ಪ್ರಜ್ಞಾಪೂರ್ವಕ ಗ್ರಹಿಕೆಯುಳ್ಳ ಹೂವಯ್ಯನಿಗೆ ತಾನು ಪಡೆದುಕೊಂಡಿರುವ ಆಧುನಿಕ ಶಿಕ್ಷಣ ಅಲ್ಲಿಯ ಜಡವ್ಯವಸ್ಥೆಯ ಸಂಕೀರ್ಣತೆಯನ್ನು ಪರಿಹರಿಸಲು ಪ್ರೇರೇಪಿಸಿದೆ. ಹೂವಯ್ಯ ತನ್ನ ಬದುಕಿನ ಅನುಭವದ ಮೂಲಕವೇ ತನ್ನ ಕುಟುಂಬ ಮತ್ತು ಸಮಗ್ರ ಕಾನೂನಿನ ಹಿತಚಿಂತನೆಗಾಗಿ ಪ್ರತಿಭಟನೆಗೆ ತೊಡಗುತ್ತಾನೆ.

ಹೂವಯ್ಯನ ಆಗಮನ ಚಂದ್ರಯ್ಯಗೌಡರಿಗೆ ಮಾತ್ರವಲ್ಲ, ಇಡೀ ಕಾನೂರು ಹಾಗೂ ಸುತ್ತಮುತ್ತಲಿನ ಗ್ರಾಮಗಳನ್ನು ತನ್ನ ಉಪದೇಶದಿಂದ ನಿರ್ದೇಶಿಸುತ್ತಿದ್ದ ವೆಂಕಪ್ಪಜೋಯೀಸರಿಗೂ ಹೊಸ ಬಿಕ್ಕಟ್ಟನ್ನು ತರುತ್ತದೆ. ಈ ಇಬ್ಬರಿಗೂ ಹೂವಯ್ಯನ ಗಂಭೀರ ವ್ಯಕ್ತಿತ್ವ, ಅನುಭವಪ್ರಣೀತ ದಾರ್ಶನಿಕ ಚಿಂತನೆ ಹಾಗೂ ಎಲ್ಲರನ್ನೂ ತನ್ನೆಡೆ ಸೆಳೆಯುವ ಸುಶಿಕ್ಷಿತ ವ್ಯಕ್ತಿತ್ವದ ಬಗ್ಗೆ ಭಯ ಎಂತಲೇ ಚಂದ್ರಯ್ಯಗೌಡರಲ್ಲಿ ಹುದುಗಿದ್ದ ದಾಯಾದಿಮತ್ಸರದ ಜೋಯೀಸರ ನೆರವೂ ಸಿಕ್ಕು ಉರಿವ ಬೆಂಕಿಗೆ ತುಪ್ಪ ಹಾಕಿದಂತಾಗುತ್ತದೆ. ತನ್ನ ವೈಚಾರಿಕ ಚಿಂತನೆಗಳಿಂದ ರೂಢಿಸಿಕೊಂಡಿದ್ದ ಶೋಷಣಾರಹಿತ ಸಮಾನ ಮಾನವೀಯ ಕಳಕಳಿಯಿಂದಾಗಿ ಹೂವಯ್ಯ ಜನಸಾಮಾನ್ಯರಲ್ಲಿ ಬೆರೆಯುವುದು ಕುವೆಂಪುರವರ ಜನಸಾಮಾನ್ಯರ ಬಗೆಗಿನ ಆಸಕ್ತಿ, ಜನಸಾಮಾನ್ಯರನ್ನು 'ಶ್ರೀಸಾಮಾನ್ಯ'ರೆಂದು ಸಂಭೋದಿಸಿದ ಆಳ ಪ್ರೀತಿಯನ್ನು ತೋರಿಸುತ್ತದೆ.

೧. ಸಹ್ಯಾದ್ರಿ, ಪುಟ ೭೪೫, ೭೪೬

ಬೇಸಾಯದ ಒಂದು ಆಕಸ್ಮಿಕ ಘಟನೆಯಿಂದ ಚಂದ್ರಯ್ಯಗೌಡರ ರೌದ್ರಾವತಾರಕ್ಕೆ ಆಳುಗಳಾದ ಭೈರ-ಸಿದ್ಧರು ನೇಗಿಲ ಕುಳ ಎತ್ತಿನ ಕಾಲಿಗೆ ತಾಗಿಸಿ ರಕ್ತ ಬಂದುದಕ್ಕೆ ಹೆದರಿ ಮನೆಗೆ ಓಡುವ ದೃಶ್ಯ ಕೆಳವರ್ಗದವರ ಮೇಲಿನ ದೌರ್ಜನ್ಯವನ್ನು ಪ್ರತಿಬಿಂಬಿಸುತ್ತಿದ್ದು, ಕುವೆಂಪುರವರ ನಿಲುವು ದಲಿತಪರವಾಗಿಲ್ಲವೆಂದೇ ಹೇಳಬಹುದು.

ಒಟ್ಟಾರೆಯಾಗಿ ಹೇಳುವುದಾದರೆ ಹೂವಯ್ಯ ಜನಸಾಮಾನ್ಯ ಬದುಕಿನಿಂದಲೇ ಹೊರಟು ವಿದ್ಯಾವಂತನಾಗಿ ಮತ್ತೆ ಜನಸಾಮಾನ್ಯರ ನಡುವೆಯೇ ಬಂದವನು. ಆತ ಸಂಪ್ರದಾಯ ಮತ್ತು ಪುರೋಹಿತಶಾಹಿ ಬದುಕಿನ ಸಂಕಲೆಯಿಂದ ಜನಸಾಮಾನ್ಯರನ್ನು ಪಾರು ಮಾಡಿ ಪರಂಪರೆಯೊಂದಿಗೆ ಆಧುನಿಕ ಬದುಕಿನ ಸ್ವರೂಪವನ್ನು ಅವರಿಗೆ ತುಂಬಿಕೊಡುತ್ತಾನೆ. ಈ ಅನನ್ಯ ಸಂಘಟನೆಯು ಸಾಮರಸ್ಯಯುಕ್ತ ಸಾಮುದಾಯಿಕ ಬದುಕಿನ ಒಂದು ಗಂಭೀರ ಚಿತ್ರಣವಾಗಿದೆ. ವ್ಯಕ್ತಿಗಿಂತ ಆತನ ಜೀವನ ಧೋರಣೆಯಲ್ಲಿನ ದೋಷಗಳನ್ನು ಅವರಿಗೆ ಮನವರಿಕೆ ಮಾಡಿಕೊಡುವಂಥ ತಾತ್ವಿಕ ದೃಷ್ಟಿ ಮಾನವ-ಮಾನವರ ನಡುವಣ ಸಂಬಂಧದ ನೈಜನೆಲೆಯನ್ನು ಗಟ್ಟಿಗೊಳಿಸುವ ಸ್ಪಷ್ಟ ಕಳಕಳಿಯೇ ಹೌದು. ಪ್ರಸ್ತುತ ಬದುಕಿನಲ್ಲಿ ಲುಪ್ತವಾಗಿರುವ ಅನೇಕ ಮೌಲ್ಯಗಳು, ಆಶಯಗಳು ಇದರಲ್ಲಿವೆ. ಅದರಲ್ಲೂ ಭಾರತದಂತಹ ಬಹುಭಾಷೆ, ಹಲವು ಸಂಸ್ಕೃತಿ, ನಾನಾ ಜನಾಂಗಗಳುಳ್ಳ ದೇಶಗಳು ಇಂಥ ಸಾಮಾಜಿಕ ಸಮಸ್ಯೆಗಳಿಗೆ ಅತ್ಯಂತ ಎಚ್ಚರದಿಂದ ಸ್ಪಂದಿಸಬೇಕಾಗಿದೆ. ಕಾನೂರು ಹೆಗ್ಗಡತಿ ಆ ಸಾಧ್ಯತೆಯನ್ನು ಗಂಭೀರವಾಗಿ ಧ್ವನಿಸುತ್ತದೆ. ಹಾಗಾಗಿಯೇ ಮ್ಯಾಗ್ಸೆಸ್ಸೆ ಪ್ರಶಸ್ತಿ ವಿಜೇತರಾದ ಕೆ.ವಿ. ಸುಬ್ಬಣ್ಣನವರು ಒಂದೆಡೆ "ಕಾನೂರು ಹೆಗ್ಗಡತಿಗೆ ಸಾಟಿಯಾಗಿ ನಿಲ್ಲಬಲ್ಲ ಇನ್ನೊಂದು ಕೃತಿಯಿಲ್ಲವೆಂದು ನಂಬಿಕೆ"[೧] ಎಂದು ಹೇಳಿದ್ದಾರೆ.

ವರ್ಣಾಶ್ರಮ ಧರ್ಮ, ಜಾತಿಪದ್ಧತಿ, ಅಸ್ಪೃಶ್ಯತೆ, ವರ್ಗಸಂಘರ್ಷ ಮುಂತಾದ ಸಾಮಾಜಿಕ ಸಮಸ್ಯೆಗಳ ನೆಲೆಯಲ್ಲಿ ಕುವೆಂಪು ಕಾದಂಬರಿಗಳನ್ನು ವ್ಯಾಖ್ಯಾನಿಸುವ ಬಗೆ ಇಲ್ಲಿದೆ. ಸಮಾಜವಾದ ಮತ್ತು ಸಾಮಾಜಿಕ ಮನುಷ್ಯನ ಪರಿಕಲ್ಪನೆ ಇಲ್ಲಿನ ಕೇಂದ್ರ, ಬಂಡಾಯವಾದಿಗಳು, ದಲಿತವಾದಿಗಳು ಕುವೆಂಪು ಕಾದಂಬರಿಗಳನ್ನು ಹುಸಿಕ್ರಾಂತಿಯ ಗಾನ, ವರ್ಗಸಂಘರ್ಷದ ಹೃದಯವಿದ್ರಾವಕ ಕಥನ, ಒಡೆಯರ ದಿಬ್ಬದ ರಚನೆಗಳೆಂದು ಕರೆದಿದ್ದಾರೆ.

ಕುವೆಂಪು ಕಾದಂಬರಿಗಳಲಿ ಗಮನಿಸಬೇಕಾದ ಮತ್ತೊಂದು ಮುಖ್ಯಾಂಶವೆಂದರೆ ಕಾಲದೇಶಗಳ ಸಂಯೋಜನೆ ಮತ್ತು ಇದಕ್ಕನುಗುಣವಾದ ಪ್ರಕೃತಿವರ್ಣನೆಗಳ ಸಂಲಗ್ನತೆಯ ನೆಲೆ ..... 'ಕುವೆಂಪು ಕಾದಂಬರಿಗಳ ಜೈವಿಕ ಜಾಲ' ದೃಷ್ಟಿಯಿಂದ ನೋಡಿದಲ್ಲಿ ಐಕ್ಯತ್ರಯಗಳೆಂದು ಪ್ರಸಿದ್ಧಿ ಪಡೆದಿರುವ ಕ್ರಿಯೆ-ಕಾಲ-ದೇಶಗಳ ಸಂಯೋಜನೆ ಹೆಚ್ಚಿನ ಅಭ್ಯಾಸವನ್ನು ಬೇಡುತ್ತದೆ.

೧. ಆಧುನಿಕ ಕನ್ನಡ ಸಾಹಿತ್ಯಕ್ಕೆ ಹೀಗೆ ಬನ್ನಿ, ೧೯೯೨

'ಮಲೆಗಳಲ್ಲಿ ಮದುಮಗಳು' ಕಾದಂಬರಿ 'ಕಾನೂರು ಹೆಗ್ಗಡತಿ'ಗಿಂತ ಸತ್ವದಲ್ಲೂ, ಸ್ವರೂಪದಲ್ಲೂ ಭಿನ್ನವಾದ ರಚನೆಯಾಗಿದೆ. 'ಹೆಗ್ಗಡತಿ'ಯನ್ನು ಕೇಂದ್ರಪ್ರಜ್ಞೆಯಲ್ಲಿ ಬರೆದಿದ್ದರೆ 'ಮದುಮಗಳು' ಕಾದಂಬರಿಯನ್ನು ವಿಕೇಂದ್ರೀಕೃತ ದೃಷ್ಟಿಯಿಂದ ಸೃಜಿಸಲಾಗಿದೆ. ಇದು ಯಾವುದೇ ಒಂದು ದೃಷ್ಟಿಕೋನದ ಕಾದಂಬರಿಯಲ್ಲ, ಹರಿವ ಜೀವನವನ್ನು ಒಂದು ಕಾಲಮಾನದಲ್ಲಿ ಹಿಡಿದಿರಿಸುವ ಕೃತಿ ಮದುಮಗಳು. ಇದು ಬಾಳಿನ ನೇರವಾದ ಅಭಿವ್ಯಕ್ತಿ.

ಕುವೆಂಪು ಕಾದಂಬರಿಗಳಲ್ಲಿ ಚಿತ್ರಣಗೊಂಡಿರುವ ದಲಿತಲೋಕ ವಿಶಿಷ್ಟವಾದುದು. ಇದುವರೆಗಿನ ಲೇಖಕರು ದಲಿತರ ಸಮಸ್ಯೆಗಳನ್ನು ಮಾತ್ರ ಲಕ್ಷಿಸಿದ್ದರೆ, ಕುವೆಂಪು ದಲಿತರ ಸಮಸ್ಯೆ ಮತ್ತು ಬದುಕು ಎರಡನ್ನೂ ಸಹಾನುಭೂತಿಯಿಂದಲೇ ಚಿತ್ರಿಸಿದ್ದಾರೆ. ಸಾಮಾಜಿಕ ಅನುಶ್ರೇಣಿಯಲ್ಲಿ ದಲಿತರು ಕೆಳಸ್ತರವಾಗಿ ಎಂತಹ ಕಟ್ಟುಪಾಡುಗಳ ಮಧ್ಯೆ ಬದುಕುತ್ತಿದ್ದಾರೆ ಮತ್ತು ಅವರ ಮೇಲೆ ಧಣಿಯರೂ ಸೇರಿದಂತೆ ಇತರ ಮೇಲುಜಾತಿ ಜನ ನಡೆಸುವ ದರ್ಪ, ದೌರ್ಜನ್ಯಗಳು ಎಷ್ಟೊಂದು ಅಮಾನವೀಯವಾಗಿದೆ ಮತ್ತು ದೈನಂದಿನ ಬದುಕಿನಲ್ಲಿ ದಲಿತರನ್ನು ಕಡೆಗಣಿಸಿ ವರ್ತಿಸುವ ಜನಗಳ ಒಣಪ್ರತಿಷ್ಠೆ, ಅಹಂಕಾರ ಇವೆಲ್ಲ ಒಂದು ಕಡೆ ಬರುತ್ತವೆ. ಇದೆಲ್ಲ ಸಮಸ್ಯಾತ್ಮಕ ಬದುಕೇ ಸರಿ. ಮತ್ತೊಂದು ನಿಟ್ಟಿನಲ್ಲಿ ಹೇಳಬೇಕಾದರೆ ಇಂತಹ ಕಟ್ಟುಪಾಡುಗಳ ನಡುವೆ, ಇಕ್ಕಟ್ಟಿನಲ್ಲಿ ಸಿಲುಕಿಯೂ, ಕೆಲವೊಂದು ದಲಿತ ಪಾತ್ರಗಳು ಹೊಂದಿರುವ ಸ್ವಾಭಿಮಾನ, ಪ್ರೀತಿ, ಪ್ರೇಮ, ಸಾಹಸ ಮತ್ತು ಜಾಣ್ಮೆಗಳು ಚಿತ್ರಿತವಾಗಿವೆ. ಅಲ್ಲದೆ ಕಾದಂಬರಿಯಲ್ಲಿ ಮೊಟ್ಟಮೊದಲ ಬಾರಿಗೆ ಬೇಟೆ, ಬಲಿಪದ್ಧತಿ, ಹೆಂಡ, ಮಾಂಸಾಹಾರಗಳಂತಹ ದಲಿತ ಬದುಕಿನ ಆಚರಣೆಗಳನ್ನು ನೈಜವಾಗಿ ಬಳಸಿದ್ದಾರೆ. ಕುವೆಂಪು ಅವರು ದಲಿತರನ್ನು 'ಒಡೇರದಿಣ್ಣೆ' ಮೇಲೆ ನಿಂತು ನೋಡದೆ ಅವರನ್ನು ಸಮೀಪದಿಂದ ಕಂಡಿದ್ದಾರೆ ಎಂಬುದಕ್ಕೆ ಅವರ ಎರಡೂ ಕಾದಂಬರಿಗಳಲ್ಲಿ ದಲಿತಪಾತ್ರಗಳಿಗೆ ಸಂದಿರುವ ಸ್ಥಾನಮಾನಗಳೇ ಸಾಕ್ಷಿಯಾಗಿವೆ.

# ಅಧ್ಯಾಯ ೭

## ಕುವೆಂಪು ಮತ್ತು ಕಾರಂತರ ಕಾದಂಬರಿಗಳಲ್ಲಿ ದಲಿತಪ್ರಜ್ಞೆ

### ತೌಲನಿಕ ಅಧ್ಯಯನ

ದಲಿತ ಸಮಸ್ಯೆಯ ಕುರಿತು ತುಂಬಾ ಹಿಂದಿನಿಂದಲೂ ಕನ್ನಡದ ಲೇಖಕರು ತಮ್ಮ ಲಕ್ಷ್ಯವನ್ನು ಪೂರೈಸಿದ್ದಾರೆ. ಪಂಪನಂಥ ಕವಿ ತನ್ನ ಆಶ್ರಯದಾತನಿಗೆ ಕಾವ್ಯವನ್ನು ಬರೆಯುತ್ತಿದ್ದೇನೆ ಎಂಬ ನಿಲುವಿಗೆ ಅಂಟಿಕೊಂಡಿದ್ದರೂ, ಆತನಿಗೆ ಎದುರಾಗಿ ಕರ್ಣನ ಪಾತ್ರವನ್ನು ಕಟ್ಟಿನಿಲ್ಲಿಸುವಾಗ ಜಾತಿ ಸಮಸ್ಯೆ, ಅದರಿಂದ ಉಂಟಾಗುವ ನೋವು, ಅಪಮಾನಗಳನ್ನು ಸಹಾನುಭೂತಿಯಿಂದ ಲಕ್ಷಿಸಿರುವುದು ಕಂಡುಬರುತ್ತದೆ. ರಾಜಸತ್ತೆಯೆಂಬುದು ಸಮಾಜದಲ್ಲಿ ಯಥಾಸ್ಥಿತಿಯನ್ನು ಕಾಪಾಡಿಕೊಂಡು ಹೋಗುವುದಕ್ಕೆ ಆಸಕ್ತಿ ಹೊಂದಿರುವಾಗ, ಪಂಪನಂತವರು ಅದನ್ನು ಬದಲಿಸುವ ನಿಟ್ಟಿನಲ್ಲಿ ಆಲೋಚನೆ ಮಾಡಿದುದು ಆಶ್ಚರ್ಯವೆನಿಸುತ್ತದೆ. ಇದು ಮುಂದಿನ ಕವಿಗಳಿಗೆ ಹೇಗೆ ಪ್ರೇರಣೆಯಾಯಿತೆಂದರೆ ಮುಂದೆ ಬಂದ ವಚನಕಾರರು ಹರಿಹರ, ರಾಘವಾಂಕ ಮತ್ತು ಕನಕದಾಸರಂತಹ ಕವಿಗಳು ತಮ್ಮ ಕೃತಿಗಳಲ್ಲಿ ಪ್ರಧಾನವಾಗಿ ದಲಿತರ ಕಾಳಜಿಗಳನ್ನು ಕಾಣಿಸಿದರು. ಹಾಗೆ ಕನ್ನಡ ಸಾಹಿತ್ಯ ಪರಂಪರೆಯಲ್ಲಿ ದಲಿತರ ಸಮಸ್ಯೆಯೆಂಬುದು ಒಂದು ಮೂಲಭೂತ ಪ್ರಶ್ನೆಯಾಗಿ ಕನ್ನಡದ ಕವಿಗಳಲ್ಲಿ ಕಾಡಿದೆ.

ಭಾರತದ ಸಂದರ್ಭಗಳಲ್ಲಿ ವ್ಯಕ್ತಿಗಳು ಅಷ್ಟೇ ಅಲ್ಲ, ಸಾಹಿತಿಗಳ ಸಾಹಿತ್ಯವೂ ಕೂಡ ಜಾತಿ, ಮತ, ಧರ್ಮದೊಂದಿಗೆ ಉಸಿರಾಡುತ್ತದೆ. ಈ ವ್ಯಕ್ತಿ ಅಥವಾ ಸಾಹಿತಿ ಎಷ್ಟು ವಸ್ತುನಿಷ್ಠವಾಗಿದ್ದನೆಂದಾದರೂ ಆತನ ಕೃತಿಗಳಲ್ಲಿ ಪ್ರತ್ಯಕ್ಷವಾಗಿಯೋ, ಅಪ್ರತ್ಯಕ್ಷವಾಗಿಯೋ ಅವುಗಳ ಎಳೆ ಕಾಣದೆ ಇರಲಾಗದು. ಜಾತಿ, ಮತ ಮತ್ತು ಧರ್ಮಗಳ ಕುರಿತು ಚಿಂತಿಸುವುದು ಬರೆಯುವುದು ತಪ್ಪೆಂದಲ್ಲ. ಜಾತೀಯತೆಯಿಂದ, ಮತೀಯತೆಯಿಂದ, ಧರ್ಮೀಯತೆಯಿಂದ ಚಿಂತಿಸುವುದು ಅಥವಾ ಬರೆಯುವುದು ಸಮಂಜಸವಲ್ಲ. ಕುಲ, ಮತ, ಧರ್ಮಗಳು ಅನಿವಾರ್ಯವೆಂದಾದಲ್ಲಿ ಅವುಗಳೊಂದಿಗಿದ್ದು ಮೀರಿ ಬದುಕುವುದು ಹೇಗೆಂದು ಅರಿಯುವುದು ಅಗತ್ಯವಿದೆ. ನಮ್ಮ ನಾಡಿನೊಳಗೆ ಬಂದಾಗ ಮತ, ಕುಲ ಮುಖ್ಯವಾದಂತೆ ಹುಟ್ಟೂರಿಗೆ ಬಂದಾಗ ಜಾತಿ, ಉಪಜಾತಿ ಮುಖ್ಯವಾಗುತ್ತದೆ.

ಕುವೆಂಪು ಅವರು ಶೂದ್ರರಾಗಿದ್ದರೂ ಮೊದಲೆ ತಿಳಿಸಿದಂತೆ ತಮ್ಮ ಕಾದಂಬರಿಗಳಲ್ಲಿ ಜಮೀನ್ದಾರಿ ಪರವಾದ ಧೋರಣೆಯನ್ನು ಹೊಂದಿರುವುದು ಹಾಗೂ ದಲಿತ ಜೀವನವನ್ನು ಚಿತ್ರಿಸಿದರೂ ಅವರ ಧೋರಣೆ ಪೂರ್ಣ ಪ್ರಮಾಣದಲ್ಲಿ ದಲಿತಪರವಾಗಿಲ್ಲ ಎಂಬುದೆ ಹಲವಾರು

ವಿಮರ್ಶಕರ ಹೇಳಿಕೆಯಾಗಿದೆ. ಅವರ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಕೆಳವರ್ಗದ ನಾಯಿಗುತ್ತಿಯನ್ನು ಮುಖ್ಯಪಾತ್ರವಾಗಿ ತಂದರೂ ಆ ಪಾತ್ರವನ್ನು ಹೆಚ್ಚು ಹೆಚ್ಚು ಉಜ್ವಲಗೊಳಿಸುವ ಗೋಜಿಗೆ ಹೋಗಿಲ್ಲ ಎಂದೇ ಹೇಳಬಹುದು. ಇಲ್ಲಿ ಗುತ್ತಿಯ ಸುತ್ತ ಎಲ್ಲಾ ಘಟನೆಗಳು ನಡೆಯುವ ಸಂಭವವಿದ್ದರೂ ಮುಕುಂದಯ್ಯ ಪಾತ್ರವನ್ನು ತಂದು ಕಾದಂಬರಿಯ ಮೊದಲೆ ಇಲ್ಲಿ ಯಾರೂ ಮುಖ್ಯರಲ್ಲ ಎಂದು ಹೇಳಿ ಎಲ್ಲ ಪಾತ್ರವನ್ನು ಪೂರ್ಣದೃಷ್ಟಿಯಲ್ಲಿ ನೋಡಿರುವುದು ಕಂಡುಬರುತ್ತದೆ.

ಕಾರಂತರು ಬ್ರಾಹ್ಮಣವರ್ಗದಲ್ಲಿ ಜನಿಸಿದರೂ ಅವರ ಧೋರಣೆ ಕುವೆಂಪು ಅವರಿಗಿಂತ ಹೆಚ್ಚು ದಲಿತಪರವಾಗಿರುವುದು ಕಂಡುಬರುತ್ತದೆ. ಅವರ 'ಚೋಮನದುಡಿ'ಯ ಚೋಮನ ಪಾತ್ರದ ಮಧ್ಯದಲ್ಲಿ ಸ್ವತಃ ಲೇಖಕರೇ ನಿಂತು ಅವನ ಮನಸ್ಸಿನ ಒಳತೋಟಿಗಳನ್ನು ಹೇಳಿರುವುದು ಕಾರಂತರ ದಲಿತಪರ ಧೋರಣೆ ಮತ್ತು ಆ ವರ್ಗದ ಜನರ ಆಳ ಅಧ್ಯಯನದ ಶ್ರದ್ಧೆಯಾಗಿದೆ. ಕಾರಂತರು ಹೊಲೆಯರ ಬಗ್ಗೆಯಾಗಲೀ, ವೇಶ್ಯೆಯರ ಬಗ್ಗೆಯಾಗಲೀ ಅನುಭವದ ನೆಲಗಟ್ಟಿದ ಮೇಲೆ ಬರೆದ ಇವರ ಕಾದಂಬರಿಗಳಲ್ಲಿ ಪಾತ್ರಗಳ ಮನಸ್ಸಿನ ಸೂಕ್ಷ್ಮವಾದ ಪದರುಗಳು ಮತ್ತು ಅಲ್ಲಿ ಧ್ವನಿಸುವ ಅತೀ ಸೂಕ್ಷ್ಮವಾದ ಸಂವೇದನೆಗಳನ್ನು ಅವರು ಚಿತ್ರಿಸಿದ ರೀತಿ ಸರಳವಾಗಿದ್ದು ಅತ್ಯಂತ ನೈಜವಾಗಿದೆ. ಸಮಾಜದ ಎಲ್ಲಾ ಮಟ್ಟಗಳಲ್ಲಿ ಜೀವನದ ಹಲವಾರು ಸ್ತರಗಳಲ್ಲಿ ಬಾಳುತ್ತಿರುವ ವ್ಯಕ್ತಿಗಳ ಅಂತರಂಗದ ಆಗುಹೋಗುಗಳನ್ನು ಕಾಣುವ ಕಣ್ಣು, ಹೃದಯದ ಬಡಿತವನ್ನು ಕೇಳುವ ಕಿವಿಯನ್ನು ಹೊಂದಿದ್ದರು ಎಂಬುದಕ್ಕೆ ಕಾರಂತರ ಕಾದಂಬರಿಗಳೇ ಸಾಕ್ಷಿ. ಯಾವುದೇ ಭಾವುಕತೆ ಇಲ್ಲದೆ ಬದುಕಿನ ಹೋರಾಟದಲ್ಲಿ ಸೋತವರ ಜೀವನದಲ್ಲಿ ನೊಂದವರ ಅಳಲಿನಲ್ಲಿ ತಾವು ಭಾಗಿಯಾಗಿ ಅವರ ಕಥೆಗಳನ್ನು ಆಡಂಬರವಿಲ್ಲದೆ ತಮ್ಮ ಮುಂದಿಡುತ್ತಾರೆ. ಕಾರಂತರು ಈ ಎಲ್ಲಾ ನೋವಿನಲ್ಲಿ, ಅಳಲಿನಲ್ಲಿ ಒಂದು ರುದ್ರ ಸೌಂದರ್ಯ ಅಡಕವಾಗಿದೆ. ಜೀವನ ಚಿರಂತನಸ್ಥೈರ್ಯ ಅಭಿವ್ಯಕ್ತವಾಗಿದೆ. ಕಷ್ಟ, ಕಾರ್ಪಣ್ಯಗಳ ಬದುಕಿನಲ್ಲಿ ತಮ್ಮ ಹಿನ್ನಲೆಯ ಮಿತಿಯಲ್ಲಿ ತಮ್ಮ ನಂಬಿಕೆಗಳ ಆಧಾರದ ಮೇಲೆ ನಿಷ್ಠೆಯಿಂದ ಬದುಕಿದ ಜನರನ್ನು ನಾವೆಲ್ಲಿ ಕಾಣುತ್ತೇವೆ. ಕಟ್ಟುಕಟ್ಟಳೆಯ, ಸಂಪ್ರದಾಯದ ಹೊಸಪದರವನ್ನು ಸೇರಿಸಿ ನೋಡಿದಾಗ ಕಾಣುವುದು ಅಂತರಂಗದ ಸೌಂದರ್ಯ ಮತ್ತು ಸತ್ಯ. ಅದನ್ನು ಅರಸಿ ತಿಳಿದು ನಮಗೆ ತಿಳಿಯಪಡಿಸುವಂತಹ ಅಪೂರ್ವವಾದ ಪ್ರತಿ ಕಾರಂತರದು.

ಕುವೆಂಪು ಮತ್ತು ಕಾರಂತರು ಪ್ರಕೃತಿಯ ಸವಿಯನ್ನು ಕಂಡವರು. ಕುವೆಂಪು ಅವರ ಕಾದಂಬರಿಗಳಲ್ಲಿ ಬರುವ ಪ್ರಕೃತಿ ವರ್ಣನೆಯಂತೆ ದಟ್ಟವಾಗಿ ರಹಸ್ಯ ಗರ್ಭಿತವಾಗಿ ಅನುಭವ ವೇದ್ಯವಾಗುವಂತೆ ಕಾರಂತರು ಚಿತ್ರಿಸಿದ್ದಾರೆ. ಮಲೆಗಳಲ್ಲಿ ಮುಂಗಾರು ಮಳೆಯ ವೈಖರಿಯನ್ನು

ಕಾರಂತರು ಕುವೆಂಪುರವರಂತೆ ಆ ಮಳೆಯ ರೌದ್ರಾವತಾರ, ಬಂಡೆಗಳಿಂದ ನೀರು ಧುಮುಕುವ ರೀತಿ, ಗುಡುಗು, ಮಿಂಚುಗಳ ಆರ್ಭಟಗಳನ್ನು ರೌದ್ರ ರಮಣೀಯವಾಗಿ ಚಿತ್ರಿಸಿದ್ದಾರೆ.

ಕುವೆಂಪುರವರ ಶೂದ್ರಪರ ಪ್ರಜ್ಞೆ ಹಾಗೂ ಕಾರಂತರ ದಲಿತಪರ ಧೋರಣೆ ಹೆಚ್ಚು ಆಳವಾಗಿ ಹಾಗೂ ಅಕೃತಕವಾಗಿ ಕಂಡುಬರುವುದನ್ನು ಗುರುತಿಸಿದರೂ ಸಹ ವಾಸ್ತವವಾದ ಸತ್ಯವನ್ನು ಮಾತ್ರ ಇಬ್ಬರೂ ವರ್ಣಿಸುತ್ತಾರೆ ಅಷ್ಟೆ.

ಕುವೆಂಪು ಮತ್ತು ಕಾರಂತರಲ್ಲಿ ಕಂಡುಬರುವ ದಲಿತಪರ ಬಗೆಗಿನ ಸಾದೃಶ್ಯಗಳನ್ನು ಗುರುತಿಸಿ ಹೊರಟರೆ ಇಬ್ಬರಲ್ಲೂ ಸಹ ದಲಿತ ಜೀವನದ ತಲಸ್ಪರ್ಶಿ ವರ್ಣನೆ ಹೆಚ್ಚು ಕಲಾತ್ಮಕವಾಗಿ, ವರ್ಣನಾತ್ಮಕವಾಗಿ ಮೂಡಿಬಂದಿರುವುದು ಕಂಡುಬರುತ್ತದೆ. ಆದರೆ ದಲಿತ ಲೇಖಕರು ತಮ್ಮ ಸ್ವಅನುಭವದ ಮೂಲಕ ರಚಿಸಿದಷ್ಟು ಆಳವಾದ ಅನುಭವ ಕಂಡುಬರದಿದ್ದರೂ ಒಂದು ಕಲಾಕೃತಿಯ ರಚನೆಯಲ್ಲಿ ತರಬಹುದಾದಂತಹ ಚಿತ್ರಣ ಮತ್ತು ಅಭಿವ್ಯಕ್ತಿಯ ಶೈಲಿ ಈ ಇಬ್ಬರು ನವೋದಯ ಲೇಖಕರಲ್ಲಿ ಮೂಡಿಬಂದಿದೆ.

ಕುವೆಂಪುರವರ ಕಾದಂಬರಿಗಳನ್ನು ರಚಿಸುತ್ತಾ ದಟ್ಟ ವರ್ಣನೆಯನ್ನು ನೀಡುತ್ತಾ ಪ್ರಕೃತಿ ವರ್ಣನೆಗೆ ಹೆಚ್ಚು ಮಹತ್ವ ನೀಡಿ ಸರ್ವ ವಸ್ತುಗಳಿಗೂ ಸಮಾನತೆಯನ್ನು ಒದಗಿಸುವ ಪೂರ್ಣದೃಷ್ಟಿಯನ್ನು ಮೆರೆಯುತ್ತಾರೆ. ಈ ಅಧ್ಯಯನಕ್ಕೆ ಒಳಪಡಿಸಿರುವ ಕುವೆಂಪುರವರ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಇರುವ ಯಾವ ಪಾತ್ರವೂ ನಾಯಕ–ನಾಯಕಿಯರು ಇರದಂತೆ ಚಿತ್ರಿಸಿರುವಂತೆ ಕಾರಂತರ 'ಕುಡಿಯರ ಕೂಸು' ಕಾದಂಬರಿಯಲ್ಲೂ ಸಹ ಕಾಣಬಹುದಾಗಿದೆ. ಆದರೂ ಕುವೆಂಪು ಕಾದಂಬರಿಯಲ್ಲಿ ನಾಯಿಗುತ್ತಿ ಕೇಂದ್ರಪಾತ್ರವಾಗಿ ಕಂಡುಬರುವಂತೆ 'ಕುಡಿಯರ ಕೂಸು' ಕಾದಂಬರಿಯಲ್ಲಿ ಕರಿಯ ಕೇಂದ್ರಪಾತ್ರವಾಗಿ ಕಂಡುಬರುತ್ತದೆ. ಎರಡು ಪಾತ್ರಗಳೂ ದಲಿತ ಜನಾಂಗದ ಪ್ರತಿನಿಧಿಗಳೇ ಆಗಿವೆ. ಆದರೂ ಸಹ ಕುವೆಂಪುರವರು ಮುಕುಂದಯ್ಯ ಎಂಬ ಮತ್ತೊಂದು ಪಾತ್ರವನ್ನು ಗುತ್ತಿ ಪಾತ್ರಕ್ಕೆ ಸಮಾನವಾಗಿ ಚಿತ್ರಿಸಿ ತಮ್ಮ ಪೂರ್ಣ ದೃಷ್ಟಿಯನ್ನು ಮೆರೆದಿರುವುದನ್ನು ಕಾಣುತ್ತೇವೆ.

ಕಾರಂತರ 'ಚೋಮನ ದುಡಿ' ಕಾದಂಬರಿಯಲ್ಲಿ ದಲಿತ ಜೀವನದ ಕಷ್ಟ, ಶೋಷಣೆಗಳ ಪ್ರತೀಕವಾಗಿ, ಪ್ರತಿನಿಧಿಯಾಗಿ ಚೋಮನ ಪಾತ್ರವನ್ನು ತಂದಿದ್ದು ಕಾದಂಬರಿಯ ದುರಂತ ನಾಯಕನನ್ನಾಗಿ ಮಾಡಿರುವುದು ಕಾರಂತರ ದಲಿತಪರವಾದಂತಹ ದೃಷ್ಟಿಯನ್ನು ತೋರುತ್ತದೆ. ಆದರೆ ಕುವೆಂಪುರವರ 'ಕಾನೂರು ಹೆಗ್ಗಡತಿ'ಯಲ್ಲಿ ಮುಖ್ಯಪಾತ್ರವಾಗಿ ಕಂಡುಬರುವ ಹೂವಯ್ಯ ಜಮೀನ್ದಾರಿ ವರ್ಗದಿಂದ ಬಂದಿದ್ದು ಅವನ ಹೋರಾಟ, ಪ್ರತಿಭಟನೆ, ಧೋರಣೆ ಎಲ್ಲವೂ ಕೀಳುವರ್ಗದ ಜನರ

ಯಶಸ್ಸಿಗೆ ಶ್ರಮಿಸುವುದು ಕುವೆಂಪುರವರಲ್ಲಿ ಸುಪ್ತ ಮನಸ್ಸಿನಲ್ಲಿ ಅಡಗಿರುವ ಶ್ರೀಸಾಮಾನ್ಯರ ಬಗೆಗಿನ ಕಾಳಜಿ ಹಾಗೂ ದಲಿತ ಜನರ ಯಶಸ್ಸಿನ ಬೆನ್ನಲುಬಾಗಿದೆ. ಜಮೀನ್ದಾರಿ ಪದ್ಧತಿಯ ವಿವರವನ್ನು ನೀಡಿರುವುದು ಸಹ ಕಂಡುಬರುತ್ತದೆ. ಆದರೂ ಸಹ ಹೂವಯ್ಯನ ಪಾತ್ರದಲ್ಲಿ ಕುವೆಂಪು ಅವರೇ ಇದ್ದಾರೆಂಬುದು ಎಲ್ಲರ ಅಭಿಮತವಾಗಿದೆ.

ಕುವೆಂಪುರವರ ಕಾದಂಬರಿಗಳು ಕಾವ್ಯಾತ್ಮಕ ಭಾಷೆ ಹಾಗೂ ವಿವರಣಾತ್ಮಕವಾದ ಶೈಲಿಯಲ್ಲಿ ರಚಿತವಾಗಿದ್ದು ಸಂಸ್ಕೃತಪದಗಳ ಬಳಕೆಯನ್ನು ಕಾಣಬಹುದಾಗಿದೆ. ಕಾರಂತರ ಕಾದಂಬರಿಗಳು ಸರಳವಾದ ಭಾಷೆಯ ಬಳಕೆಯಿಂದ ಕೂಡಿದರೂ ಸಹ ವರ್ಣನೆಗಳಲ್ಲಿ ಒಂದು ಕಲಾಕೃತಿಯ ಸೃಷ್ಟಿಗೆ ಅಗತ್ಯವಾದ ಯಾವ ಅಂಶವನ್ನು ಬಿಟ್ಟಿಲ್ಲ ಎಂದೆ ಹೇಳಬಹುದು. ಕುವೆಂಪುರವರು ಕಾದಂಬರಿಯಲ್ಲಿ ತಂದಿರುವ ವಿವರಗಳು ಕಾದಂಬರಿ ಓದುಗನನ್ನು ಒಳಸೆಳೆಯುವಷ್ಟು ಕಾರಂತರ ಕಾದಂಬರಿಗಳಲ್ಲಿ ಕಂಡುಬರದಿದ್ದರೂ ಚಿಕ್ಕದಾದ ಅತಿ ವಿಸ್ತಾರವಲ್ಲದ ಕಾದಂಬರಿ ರಚನೆಯ ಶೈಲಿ ಇವರದಾಗಿದೆ.

ಕುವೆಂಪು ಮತ್ತು ಕಾರಂತರ ಕಾದಂಬರಿಗಳ ಪಾತ್ರಗಳ ಬಗ್ಗೆ ಹೇಳುವುದಾದರೆ ಎಲ್ಲವೂ ಸಮ ಪ್ರಮಾಣದ ಪಾತ್ರಗಳೇ ಆಗಿವೆ. ಅಂದರೆ 'ಕುಡಿಯರ ಕೂಸು' ಮತ್ತು 'ಮಲೆಗಳಲ್ಲಿ ಮದುಮಗಳು' ಕಾದಂಬರಿಗಳ ಎಲ್ಲಾ ಪಾತ್ರಗಳು ಸಮತೂಕದ ಪಾತ್ರಗಳಾಗಿವೆ. ಇಲ್ಲಿಯ ಯಾವ ಪಾತ್ರವನ್ನು ಮುಖ್ಯವಾಗಿ ಕಾಣದೆ ಓದಿದಾಗ ಮಾತ್ರ ಕಾದಂಬರಿ ಮತ್ತು ಲೇಖಕನ ಉದ್ದೇಶ ಪೂರ್ಣವಾಗುತ್ತದೆ ಎಂದೇ ಹೇಳಬಹುದು.

ಯಾವುದೇ ಒಂದು ವರ್ಗದ ಒಬ್ಬ ಲೇಖಕ ತನ್ನ ವರ್ಗದ ಬಗೆಗಿನ ಅತ್ಯಂತ ಪ್ರೀತಿಯಿಂದ ತನ್ನ ವರ್ಗದ ಪರವಾದ ರಚನೆಯನ್ನು ಕೈಗೊಂಡಂತೆಯೇ ಕೆಲವು ಲೇಖಕರು ತಮ್ಮ ವರ್ಗದಲ್ಲಿ ಕಂಡುಬರುವ ತಪ್ಪು ಒಪ್ಪುಗಳನ್ನು ತಮ್ಮ ರಚನೆಗಳಲ್ಲಿ ಚರ್ಚಿಸುವುದೂ ಸಾಮಾನ್ಯವಾಗಿದೆ. ಅಂತಹ ಲೇಖಕರ ಪಟ್ಟಿಯಲ್ಲಿ ಕಾರಂತರನ್ನು ಗುರುತಿಸಬಹುದು. ಇವರು ಬ್ರಾಹ್ಮಣರಾಗಿದ್ದರೂ ತಮ್ಮ ವರ್ಗದ ವಿರುದ್ಧ ಬಂಡೆದ್ದವರಂತೆ ಕಂಡುಬರದಿದ್ದರೂ ಮೇಲ್ವರ್ಗದವರಿಂದ ಅತ್ಯಂತ ಕೆಳವರ್ಗದವರೆಂದು ಗುರುತಿಸಿಕೊಂಡಿರುವ ಅಸ್ಪೃಶ್ಯರ ಮೇಲಾಗುವ ದೌರ್ಜನ್ಯದ ಬಗ್ಗೆ ತಮ್ಮ ರಚನೆಗಳಲ್ಲಿ ತರುತ್ತಾರೆ. ತಾವು ಕಂಡಂತಹ ಹಲವು ಘಟನೆಗಳನ್ನು, ಅದರಲ್ಲೂ ಸಮಾಜದಿಂದ ತಿರಸ್ಕಾರಕ್ಕೆ ಒಳಗಾದವರ ನೋವನ್ನು ಓದುವವನ ಮನಮುಟ್ಟುವಂತೆ ಚಿತ್ರಿಸಿರುವುದು ಇವರ ವಿಶೇಷವಾಗಿದೆ. ಇವರ ರಚನೆಗಳ ಅಥವಾ ಹೇಳುವ ಶೈಲಿಯ ಮತ್ತೊಂದು ವಿಶೇಷವೆಂದರೆ ತಾವು ಎಲ್ಲಿಯೂ ನೇರವಾಗಿ ಮೇಲ್ವರ್ಗದವರ ವಿರುದ್ಧ ದನಿ ಎತ್ತದೆ ಓದುಗನ ಮನಸ್ಸಿನಲ್ಲಿ ಆ ಭಾವನೆಯನ್ನು ಹುಟ್ಟುಹಾಕುವ ಕುಶಲತೆ ಇವರಲ್ಲಿದೆ. ಉದಾಹರಣೆಗೆ ಚೋಮನ ಸ್ಥಿತಿಗೆ ಒಂದು ಕಡೆ ಸಮಾಜದ ಕಟ್ಟುಕಟ್ಟಳೆಗಳು

ಕಾರಣವಾಗಿರುವ ಬಗೆಯನ್ನು ಚಿತ್ರಿಸುತ್ತಾ ಅವನ ಮೇಲೆ ಸವಾರಿ ಮಾಡುವ ಮೇಲ್ವರ್ಗದವರ ಬಗೆಗಿನ ವಿರೋಧತೆಯನ್ನು ಓದುಗನ ಮನಸ್ಸಿಗೆ ತರುತ್ತಾರೆ.

ದಲಿತ ಜೀವನ ಚಿತ್ರಣವನ್ನು ನೀಡಿರುವಂತಹ ಕುವೆಂಪು ಮತ್ತು ಕಾರಂತರಿಬ್ಬರೂ ಸಹ ದಲಿತರ ಸಂವೇದನೆ ದುಃಖಗಳನ್ನು ಚಿತ್ರಿಸಿದ್ದಾರೆಯೇ ಹೊರತು ಎಲ್ಲಿಯೂ ಪರಿಹಾರವನ್ನು ಸೂಚಿಸಿಲ್ಲ ಎಂಬುದನ್ನು ಗುರುತಿಸಬಹುದು. ಅಂದರೆ ಇಬ್ಬರ ಬರವಣಿಗೆಯಲ್ಲೂ ಸಹ ಸಮಾಜದ ಪ್ರಸ್ತುತ ಸ್ಥಿತಿಗತಿಯ, ಮೇಲ್ವರ್ಗ ಕೀಳುವರ್ಗದವರ ರೀತಿ–ನೀತಿಗಳ ಬಗ್ಗೆ ನೈಜವಾದ ಚಿತ್ರಣವನ್ನು ಕಾಣಬಹುದು. ಏನೇ ಇರಲಿ ದಲಿತಪರ ಧೋರಣೆಯನ್ನು ಲೇಖಕನಾದವನು ನೇರವಾಗಿ ಹೇಳಬೇಕೆಂದೇನೂ ಇಲ್ಲ. ಕುವೆಂಪುರವರ ಮೇಲಿರುವ ಹೇಳಿಕೆ ಕುವೆಂಪುರವರ ಧೋರಣೆ ದಲಿತಪರವಾಗಿಲ್ಲ ಎಂಬುದಕ್ಕೆ ವಿರೋಧವಾಗಿ ಕಂಡುಬರುವುದು. ಅವರು ಮೇಲ್ವರ್ಗದ ಮನಗಳ ಒಳಭಾಗವನ್ನು ವರ್ಣಿಸಿರುವಂತೆ ಹೊಲೆಮಾದಿಗರ ಗುಡಿಸಲುಗಳ ಅಂತರಂಗವನ್ನು ತೆರೆದು ತೋರಬಲ್ಲರು. ವ್ಯವಸ್ಥೆಯ ವಂಚನೆಯಿಂದ ಹುಟ್ಟುದರಿದ್ರರಾದ ಅವರ ಜೋಪಡಿಗಳಲ್ಲಿ ವಿಶೇಷವಾದರೂ ಏನಿದೆ? ನಾಯಿ ಗುತ್ತಿಯ ಜೊತೆಯಲ್ಲಿ ಓಡಿ ಹೋಗಲು ಸಿದ್ಧವಾಗಿರುವ ತಮ್ಮ ಗುಡಿಸಲಲ್ಲಿ ಮನೆದೇವರೆಂದು ಮೂಲೆಯಲ್ಲಿಟ್ಟು ಪೂಜೆ ಮಾಡುತ್ತಿದ್ದ ಒಂದು ಕುಂಕುಮ ಹಚ್ಚಿ ಕಾಣಿಕೆ ಕಟ್ಟಿದ್ದ ಒನಕೆ ತುಂಡಿನಂತಹ ಪ್ರತಿಮೆಯ ಮುಂದೆ ಅಡ್ಡಬಿದ್ದು ಅವ್ವನ ನಿಷ್ಕ್ರಿಯ ಮೌನದ ಮತ್ತು ಅರ್ದ್ರನಯನದ ಆಶೀರ್ವಾದ ಪಡೆದು ಬೀಳ್ಕೊಂಡಳು. ಅನಂತರ ಅವಳ ತಾಯಿ 'ಸೇಸಿ ಒಳಗೆ ನಡೆದು, ಒಂದು ಬಿಲ್ಲೆಯನ್ನು ತೊಳೆದು ಕಣ್ಣೂರು ಗಣಪನಿಗೆ ಹಣ್ಣು ಕಾಯಿ ಮಾಡಿಸುವುದಾಗಿ ಹೇಳಿಕೊಂಡು, ಅದನ್ನು ಮೂಲೆಯ ಒನಕೆ ದೇವರಿಗೆ ಸುತ್ತು ಬರಿಸಿ, ಒಂದು ಬಟ್ಟೆಯಲ್ಲಿ ಸುತ್ತಿ ಆಗಲೇ ಜೋತು ಹಾಕಿದಳು'. ಆದ್ದರಿಂದ ದಲಿತರ ಗುಡಿಸಲುಗಳ ಅಂತರಂಗವನ್ನು ನೋಡಿಲ್ಲ ಎಂಬ ಟೀಕೆ ನಿರಾಧಾರವಾದದ್ದು.

ಅದರಂತೆ ಕಾರಂತರ ಪ್ರಜ್ಞೆ ಹೆಚ್ಚು ದಲಿತ ಪರವಾಗಿ ಕಂಡುಬಂದರೂ ಚೋಮನ ಸಾವಿಗೆ ಸಾಮಾಜಿಕ ಅಂತ್ಯವನ್ನು ತರಬಹುದಾದರೂ ವೈಯಕ್ತಿಕ ಅಂತ್ಯವನ್ನು ತಂದಿರುವುದು ಅಂದರೆ ಅವನ ಸಾವಿಗೆ ಸಮಾಜದ ಕಟ್ಟುಕಟ್ಟಳೆ ಜಾತಿಪದ್ಧತಿ ಕಾರಣವಾಗಿತ್ತು ಎಂದು ಚಿತ್ರಿಸುತ್ತಾ ಹೋದರೂ ಒಬ್ಬ ತಂದೆಯಾಗಿ ಮಗಳ ಅನೈತಿಕ ಸಂಬಂಧವನ್ನು ಕಣ್ಣಾರೆ ಕಂಡು ವೈಯಕ್ತಿಕ ಕಾರಣದಿಂದ ಅಂತ್ಯ ಕಂಡ ಬಗೆಯನ್ನು ಚಿತ್ರಿಸಿರುವುದು ಕಾರಂತರಲ್ಲೂ, ಯಾಕೆ ಯಾವುದೇ ಲೇಖಕನಲ್ಲೂ ಯಾವುದೇ ಒಂದು ನಿರ್ದಿಷ್ಟ ಧೋರಣೆಯನ್ನು ಚಿತ್ರಿಸಲು ಅಥವಾ ಗುರುತಿಸಲು ಸಾಧ್ಯವಿಲ್ಲ ಎಂಬುದನ್ನು ಒಪ್ಪಬಹುದಾಗಿದೆ.

ಒಟ್ಟಾರೆಯಾಗಿ ಹೇಳುವುದಾದರೆ ಕುವೆಂಪು ಮತ್ತು ಕಾರಂತರಲ್ಲಿ ದಲಿತಪರ ಧೋರಣೆ ದಲಿತ ಚಳುವಳಿಯ ಕಲ್ಪನೆಯೂ ಇಲ್ಲದ ಅವಧಿಯಲ್ಲಿ ಮೂಡಿಬಂದಿರುವುದು ಸಾಹಿತ್ಯ ಸಮಾಜಕ್ಕೆ ನೀಡಿರುವ ಕೊಡುಗೆಗಳಲ್ಲಿ ಒಂದು ಎಂದೇ ಗುರುತಿಸಬಹುದು. ಯಾವುದೇ ಒಬ್ಬ ಲೇಖಕ ತನ್ನ ಸಮಾಜದ ಸ್ಥಿತಿಗತಿಯ ಬಗ್ಗೆ ಸಾರ್ವಕಾಲಿಕವಾದ ಹಾಗೂ ಸಮಕಾಲೀನವಾದ ವಸ್ತುಸ್ಥಿತಿಯನ್ನು ಹೇಳುತ್ತಾ ಅದನ್ನು ಒಂದು ಸುಂದರ ಕಲಾಕೃತಿಯಾಗಿ ಸಾಹಿತ್ಯಕ್ಕೆ ನೀಡುವ ಜವಾಬ್ದಾರಿಯನ್ನು ಹೊಂದಿರುತ್ತಾನೆ. ಸಾಧ್ಯವಾದರೆ ಸಮಾಜದ ಯಾವುದೇ ಒಂದು ಸಮಸ್ಯೆಯನ್ನು ಅಥವಾ ಸ್ಥಿತಿಯನ್ನು ಹೇಳುತ್ತಿದ್ದರೂ ಅದಕ್ಕೆ ಪರಿಹಾರವನ್ನು ಸ್ವಂತ ತಿಳುವಳಿಕೆಯ ಮೇಲೆ ಸೂಚಿಸಲೂಬಹುದು. ಪರಿಹಾರವನ್ನು ಸೂಚಿಸದಿದ್ದರೂ ಕಲಾಕೃತಿಗೆ ಯಾವುದೇ ಭಂಗ ಬರುವುದಿಲ್ಲ. ಈ ದೃಷ್ಟಿಯನ್ನು ನಾವು ಚರ್ಚಿಸಲು ಹೊರಟಿರುವ ಕುವೆಂಪು ಮತ್ತು ಕಾರಂತರ ಕಾದಂಬರಿಗಳಿಗೆ ಅನ್ವಯಿಸಬಹುದು. ಈ ಅಧ್ಯಯನದ ಉದ್ದೇಶದಿಂದ ಮಾತ್ರ ಈ ಕಾದಂಬರಿಗಳಲ್ಲಿ ಕಂಡುಬರುವ ದಲಿತ ಜೀವನದ ಚಿತ್ರಣ ಹಾಗೂ ಲೇಖಕರುಗಳು ಹೊಂದಿರುವ ದಲಿತ ಪರ ನಿಲುವುಗಳ ಬಗ್ಗೆ ಚರ್ಚಿಸಲಾಗಿದೆ.

ಒಟ್ಟಾರೆಯಾಗಿ ಆಧುನಿಕ ಕನ್ನಡದ ಮೊದಲ ಘಟ್ಟವಾದ ನವೋದಯದಲ್ಲೇ ಈ ಶತಮಾನದ ಕೊನೆಯಲ್ಲಿ ಕಂಡುಬರುವ ದಲಿತ ಸಾಹಿತ್ಯದ ಮೂಲವನ್ನು ಕಾಣಬಹುದಾಗಿದ್ದು ಅಂತಹ ರಚನೆಯಲ್ಲಿ ಕುವೆಂಪು ಮತ್ತು ಕಾರಂತರು ಸಮ ಮನಸ್ಸುಳ್ಳವರೆಂದು ತೀರ್ಮಾನಕ್ಕೆ ಬರುವುದು ಉಚಿತವಾದುದೆಂದು ತೋರುತ್ತದೆ.

## ಅಧ್ಯಾಯ ೮

### ಉಪಸಂಹಾರ:

ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಎರಡು ರೀತಿಯ ಮನೋಧರ್ಮವುಳ್ಳ ಲೇಖಕರನ್ನು ಗುರುತಿಸಬಹುದು. ಸಾಹಿತ್ಯವೆಂದರೆ ಹೊತ್ತು ಹೋಗದೆ ಕಾಲ ಕಳೆಯುವುದಕ್ಕಾಗಿ, ಕೇವಲ ಮನೋರಂಜನೆಯ ಮಾಧ್ಯಮವೆಂದು ತಿಳಿದವರು ಒಂದು ಗುಂಪಾದರೆ, ಈ ಮಾಧ್ಯಮವನ್ನು ಸಾಮಾಜಿಕ ಉದ್ದೇಶಗಳಿಗೆ ಬಳಸಿಕೊಂಡು, ಈ ಮೂಲಕ ಸಮಾಜದಲ್ಲಿ ಜಾಗೃತಿಯನ್ನು ತರಲು ಸಾಧ್ಯವೆಂದು ತಿಳಿದು ಕೃತಿ ರಚನೆ ಮಾಡಿದ ಮತ್ತೊಂದು ಗುಂಪಿನ ಲೇಖಕರೂ ಇದ್ದಾರೆ. ಇಂತಹ ವಿಂಗಡಣೆ ತೀರಾಸರಳವೆಂದು ತೋರಬಹುದಾದರೂ ಒಬ್ಬೊಬ್ಬ ಲೇಖಕ ತಾನು ಹೊಂದಿರುವ ವಿಶಿಷ್ಟ ಸಂವೇದನೆಗಳಿಂದಾಗಿ ಈ ರೀತಿಯ ಸರಳೀಕೃತ ಧೋರಣೆಗಳನ್ನು ಮೀರಿ ನಿಂತಿರುವುದು ಉಂಟು. ೧೦ನೇ ಶತಮಾನದ ಪಂಪ, ಪೊನ್ನರಂತಹ ಕವಿಗಳನ್ನೇ ನೋಡಬಹುದು. ಇವರೆಲ್ಲಾ ರಾಜಾಶ್ರಯ ಪಡೆದು, ಕಾವ್ಯ ನಾಯಕರ ಜೊತೆ ಆಶ್ರಿತ ರಾಜರನ್ನು ಹೋಲಿಸಿ ಬರೆದುದಕ್ಕೆ ಹರಿಹರನಂತಹ ಕವಿಗಳು ಖಾರವಾಗಿಯೇ ಪ್ರತಿಕ್ರಿಯಿಸಿದ್ದಾರೆ. ಆದರೆ ಪಂಪ ತನ್ನ ಕೃತಿಗಳಲ್ಲಿ 'ಓಲೈಸಿ ಬಾಳ್ವುದೇ ಕಷ್ಟಂ ಇಳಾಧೀನಾಥರಾ' ಎಂದಿರುವುದರ ಜೊತೆಗೆ ಜಾತಿ ಪದ್ಧತಿಯ ಕುರಿತು ಧ್ವನಿ ಎತ್ತಿ ವಿರೋಧಿಸಿರುವುದನ್ನು ಗಮನಿಸಿದರೆ ಆತನ ಧೋರಣೆಗಳು ಆಶ್ಚರ್ಯ ಹುಟ್ಟಿಸುತ್ತವೆ.

ಆಧುನಿಕ ಕನ್ನಡ ಸಾಹಿತ್ಯದ ಘಟ್ಟಗಳಲ್ಲಿ ಇತ್ತೀಚೆಗೆ ಹೆಚ್ಚು ಪ್ರಚಲಿತದಲ್ಲಿದ್ದಂತಹ ದಲಿತ ಸಾಹಿತ್ಯದಲ್ಲಿ ಮೂಡಿಬಂದಂತಹ ರಚನೆಗಳು ಮಾತ್ರ ದಲಿತಪರವಾದವು ಎಂಬ ಹೇಳಿಕೆ ಆಗಾಗ ಕೇಳಿಬರುತ್ತಿದ್ದರೂ ಯಾವುದೇ ಒಂದು ಜನಾಂಗ, ವರ್ಗದ ಪರವಾದಂತಹ ನಿಲುವುಗಳನ್ನು ಉಳ್ಳಂತಹ ಸಾಹಿತ್ಯ ರಚನೆ ಆ ಜನಾಂಗದ, ವರ್ಗ ಇದ್ದಂತಹ ಕಾಲದಿಂದಲೂ ಇತ್ತೆಂದು ಹೇಳಬಹುದಾಗಿದೆ. ಈ ರೀತಿಯ ಹೇಳಿಕೆಗೆ ಕಾರಣ ದಲಿತ ಎಂದೂ ಗುರುತಿಸಿಕೊಳ್ಳುವ ಮೊದಲೇ ಆ ಜನ ಪಡುತ್ತಿದ್ದ ಕಷ್ಟ ಕಾರ್ಪಣ್ಯಗಳನ್ನು ಚಿತ್ರಿಸಿರುವಂತಹ ರಚನೆಗಳು ಮೂಡಿಬಂದಿವೆ. ಮೊದಲೇ ಹೇಳಿರುವಂತೆಯೇ ಮಹಾಭಾರತದಲ್ಲಿಂದಲೂ ಮೂಡಿಬಂದಿರುವುದನ್ನು ಕಾಣಬಹುದು.

ಅದರಂತೆ ನವೋದಯದಲ್ಲೇ ದಲಿತಪರ ಧೋರಣೆ ಕಂಡುಬಂದಿರುವುದನ್ನು ಈಗಾಗಲೇ ಹಲವಾರು ವಿಮರ್ಶಕರು ಗುರುತಿಸಿರುವಂತೆಯೇ ಈ ಅಧ್ಯಯನವನ್ನು ಮಾಡಲಾಗಿದೆಯೆಂದು ಹೇಳಬಹುದಾಗಿದೆ. ಮೊದಲೇ ಹೇಳಿರುವ ಉದ್ದೇಶದಂತೆ ದಲಿತೇತರ ಲೇಖಕರಾದ ಕುವೆಂಪು ಮತ್ತು

ಕಾರಂತರ ಕಾದಂಬರಿಗಳಲ್ಲಿ ಕಂಡುಬರುವ ದಲಿತ ಜೀವನ ಚಿತ್ರಣ ಹಾಗೂ ಲೇಖಕರು ಹೊಂದಿರುವ ದಲಿತಪರ ಧೋರಣೆಯನ್ನು ವಿಹಂಗಮ ನೋಟದಂತೆ ಇಲ್ಲಿ ನೋಡಲಾಗಿದೆ.

ಈ ಅಧ್ಯಯನದ ಅನುಕೂಲಕ್ಕಾಗಿ ಈ ಇಬ್ಬರು ಲೇಖಕರ ತಲಾ ಎರಡು-ಎರಡು ಕಾದಂಬರಿಗಳನ್ನು ಆಯ್ಕೆ ಮಾಡಿಕೊಂಡು ವಿಶ್ಲೇಷಿಸುವ ಪ್ರಯತ್ನದ ಜೊತೆಗೆ ವಿವರಿಸಲು ಅನುಕೂಲವಾಗುವಂತೆ ಹಲವಾರು ಅಧ್ಯಾಯಗಳಾಗಿ ವಿಭಾಗಿಸಿಕೊಂಡು ಈ ನಿಬಂಧವನ್ನು ರಚಿಸಲಾಗಿದೆ.

ಮೊದಲ ಅಧ್ಯಾಯದಲ್ಲಿ ಶೀರ್ಷಿಕೆಯೇ ಹೇಳುವಂತೆ ಈ ಅಧ್ಯಾಯವನ್ನು ಮಾಡಲು ಹೊಂದಿರುವ ಉದ್ದೇಶ ಮತ್ತು ಅದಕ್ಕಾಗಿ ಬಳಸಿಕೊಳ್ಳುವ ಸಾಮಗ್ರಿಗಳ ವ್ಯಾಪ್ತಿಯನ್ನು ಹೇಳಲಾಗಿದೆ.

ಎರಡನೇ ಅಧ್ಯಾಯದಲ್ಲಿ ದಲಿತ ಪ್ರಜ್ಞೆ ಮತ್ತು ಕನ್ನಡದಲ್ಲಿ ದಲಿತ ಪ್ರಜ್ಞೆ ಬೆಳೆದು ಬಂದ ಒಂದು ಚಾರಿತ್ರಿಕ ನೋಟವನ್ನು, ದಲಿತರು ಮತ್ತು ದಲಿತೇತರ ಲೇಖಕರುಗಳಲ್ಲಿ ಮೂಡಿಬರುವ ದಲಿತಪರವಾದ ಧೋರಣೆಗಳ ವ್ಯತ್ಯಾಸ ಅನುಭವದ ಗ್ರಹಿಕೆ ಭಾಷೆಯ ಬಳಕೆ ಸಂವೇದನೆಯ ಶೈಲಿಯನ್ನು ದಲಿತ ಪ್ರಜ್ಞೆಯ ಬಗ್ಗೆ ಲೇಖಕರು ಹೇಳಿರುವ ವ್ಯಾಖ್ಯಾನವನ್ನು ಸಂಕ್ಷಿಪ್ತವಾಗಿ ಹೇಳಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ತೆಗೆದುಕೊಂಡಿರುವ ಇಬ್ಬರು ಲೇಖಕರಲ್ಲಿ ಒಬ್ಬರಾದ ಕಾರಂತರ ಜೀವನ ಬರವಣಿಗೆ ಸೃಜನಶೀಲತೆ ಅವರ ಬದುಕಿನ ಮಹತ್ವದ ಘಟ್ಟಗಳು ಅವರು ಹೊಂದಿದ ಗೌರವ ಸ್ಥಾನಗಳ ಬಗ್ಗೆ ಸಂಕ್ಷಿಪ್ತವಾಗಿ ವಿವರಿಸಲಾಗಿದೆ.

ನಾಲ್ಕನೇ ಅಧ್ಯಾಯದಲ್ಲಿ ಕಾರಂತರಿಗೆ ತೌಲನಿಕವಾಗಿ ಅಭ್ಯಾಸಿಸಲು ಆಯ್ದುಕೊಂಡಿರುವ ಕುವೆಂಪುರವರ ಜೀವನ ವ್ಯಕ್ತಿತ್ವ ಸೃಜನಶೀಲತೆ ಅವರ ಗೌರವ ಪದವಿ ಜೀವನದ ಪ್ರಮುಖ ಘಟ್ಟಗಳನ್ನು ತಿಳಿಸಲಾಗಿದೆ.

ಈ ಅಧ್ಯಯನದ ಮುಖ್ಯ ಉದ್ದೇಶವಾಗಿರುವ 'ದಲಿತ ಪ್ರಜ್ಞೆ'ಯನ್ನು ಕುರಿತು ಕಾರಂತರು ಮತ್ತು ಕುವೆಂಪುರವರು ತೋರಿರುವ ಕಾಳಜಿಯನ್ನು ಪ್ರತ್ಯೇಕವಾಗಿ ಐದು ಮತ್ತು ಆರನೇ ಅಧ್ಯಾಯಗಳಲ್ಲಿ ಉಪಶೀರ್ಷಿಕೆಗಳನ್ನು ಕೊಟ್ಟು ವಿವರಿಸಲಾಗಿದೆ. ಈ ಎರಡೂ ಅಧ್ಯಯನಗಳ ಅಂತ್ಯಗಳಲ್ಲಿ ಒಟ್ಟಾರೆ ಅಭಿಪ್ರಾಯಗಳನ್ನು ನೀಡಲಾಗಿದೆ.

ನಿಬಂಧಕ್ಕೆ ಆಯ್ಕೆ ಮಾಡಿಕೊಂಡಿರುವ ವಿಷಯವನ್ನು ಏಳನೇ ಅಧ್ಯಾಯದಲ್ಲಿ ಕುವೆಂಪು ಮತ್ತು ಕಾರಂತರು ತಮ್ಮ ಕಾದಂಬರಿಗಳಲ್ಲಿ ದಲಿತಪ್ರಜ್ಞೆಯನ್ನು ಹೇಗೆ ಕಲಾತ್ಮಕಗೊಳಿಸಿದ್ದಾರೆ ಮತ್ತು ಇಬ್ಬರ ಕಾದಂಬರಿಗಳನ್ನು ತೌಲನಿಕ ದೃಷ್ಟಿಯಿಂದ ನೋಡಲಾಗಿದೆ.

ಅಂದರೆ ಒಟ್ಟಾರೆಯಾಗಿ ಈ ಅಧ್ಯಯನದ ಮುಖ್ಯ ಶೀರ್ಷಿಕೆಯಡಿಯಲ್ಲಿ ಮಾಡಬಹುದಾದಂತಹ ತಲಸ್ಪರ್ಶಿ ಅಧ್ಯಯನವನ್ನು ಮಾಡಲಾಗಿದೆ ಎಂದು ಹೇಳಬಹುದಾದರೂ ಇದಕ್ಕಿಂತಲೂ ಆಳವಾದ ಸವಿವರವಾದ ಹೆಚ್ಚು ವಿವರಣಾತ್ಮಕವಾಗಿ ಒಂದು ಮಹಾ ಪ್ರಬಂಧ ರಚನೆಗೆ ಸಾಕಾಗುವಷ್ಟು ವಿಷಯ ಇಲ್ಲಿ ಅಡಗಿದೆ ಎಂದೇ ಹೇಳಬಯಸುತ್ತೇನೆ. ಒಂಭತ್ತನೆಯ ಅಧ್ಯಾಯವಾಗಿ ಉಪಸಂಹಾರದಲ್ಲಿ ಈ ಅಧ್ಯಯನದಲ್ಲಿ ಮಾಡಿರುವ ಕಾರ್ಯವನ್ನು ಸಂಕ್ಷಿಪ್ತವಾಗಿ ಹೇಳಿದ್ದು, ಮುಂದಿನ ಅಧ್ಯಾಯದಲ್ಲಿ ಈ ಅಧ್ಯಯನಕ್ಕೆ ಸಹಕಾರಿಯಾದ ಗ್ರಂಥಗಳ ಬಗೆಗಿನ ವಿವರವನ್ನು ನೀಡಲಾಗಿದೆ.

ಈ ಶೀರ್ಷಿಕೆಯ ಪ್ರಸ್ತುತತೆಯನ್ನು ಕುರಿತು ಹೇಳುವುದಾದರೆ ಎಲ್ಲಿಯವರೆಗೆ ದಲಿತರ ಮೇಲಾಗುವ ಶೋಷಣೆ, ದೌರ್ಜನ್ಯಗಳು ನಡೆಯುವುದೋ ಅಲ್ಲಿಯವರೆಗೂ ಸಾಹಿತ್ಯದಲ್ಲಿ ದಲಿತರ ಪರವಾಗಿ ಅಂದರೆ ದಲಿತ ಮತ್ತು ದಲಿತೇತರ ಲೇಖಕರು ಪರವಿರೋಧವೆನ್ನದೆ ಜನರಲ್ಲಿ ಜಾಗೃತಿಯನ್ನು ಮೂಡಿಸಬೇಕು ಮತ್ತು ದಲಿತರ ಜೀವನ ಚಿತ್ರಣವನ್ನು ಕೊಡಬೇಕು. ದಲಿತ ಪ್ರಜ್ಞೆ ಎನ್ನುವುದು ಇಂದಿಗೂ ಸಹ ತನ್ನ ಪ್ರಸ್ತುತತೆಯನ್ನು ಉಳಿಸಿಕೊಂಡು ಬಂದಿದೆ.

## ಅಧ್ಯಾಯ ೯

### ಗ್ರಂಥ ಋಣ


೧ ಕಾನೂರು ಹೆಗ್ಗಡತಿ : ಕುವೆಂಪು (೨೦೦೨)
ಉದಯರವಿ ಪ್ರಕಾಶನ
ವಾಣಿವಿಲಾಸಪುರಂ, ಮೈಸೂರು-೦೨

೨ ಮಲೆಗಳಲ್ಲಿ ಮದುಮಗಳು : ಕುವೆಂಪು (೨೦೦೧)
ಉದಯರವಿ ಪ್ರಕಾಶನ
ವಾಣಿವಿಲಾಸಪುರಂ, ಮೈಸೂರು-೦೨

೩ ಚೋಮನದುಡಿ : ಶಿವರಾಮ ಕಾರಂತ (೨೦೦೨)
ಸ್ವಪ್ನ ಬುಕ್‌ಹೌಸ್, ೨ನೇ ಮುಖ್ಯರಸ್ತೆ
ಗಾಂಧಿನಗರ, ಬೆಂಗಳೂರು-೦೯

೪ ಕುಡಿಯರ ಕೂಸು : ಶಿವರಾಮ ಕಾರಂತ (೧೯೮೬)
೪ನೇ ಮುದ್ರಣ
ರಾಜಲಕ್ಷ್ಮಿ ಪ್ರಕಾಶನ, ಬೆಂಗಳೂರು

೫ ದಲಿತ ಅಧ್ಯಯನ : ಸಂ.ಡಾ.ಟಿ.ಆರ್.ಚಂದ್ರಶೇಖರ್
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ
ಹಂಪಿ

೬ ದಲಿತರು ಮತ್ತು ಪರ್ಯಾಯ ರಾಜಕಾರಣ : ಸಂ.ಡಾ.ಪಿ.ಮಹದೇವಯ್ಯ
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ
ಹಂಪಿ

೭ ದಲಿತ ಚಿಂತನೆ : ಮೊಗಳ್ಳಿ ಗಣೇಶ್ (೨೦೦೨)
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ
ಹಂಪಿ

೮ ಬಂಡಾಯ-ದಲಿತ ಸಾಹಿತ್ಯ : ಡಾ.ಪುರುಷೋತ್ತಮ ಬಿಳಿಮಲೆ
ಕರ್ನಾಟಕ ಸಾಹಿತ್ಯ ಅಕಾಡೆಮಿ
ಕನ್ನಡ ಭವನ, ಜೆ.ಸಿ.ರಸ್ತೆ
ಬೆಂಗಳೂರು-೦೨

೯ ಕನ್ನಡ ದಲಿತ ಸಾಹಿತ್ಯ : ಸಂ.ಡಾ.ಅರ್ಜುನ ಗೊಳಸಂಗಿ
ಕರ್ನಾಟಕ ಸಾಹಿತ್ಯ ಅಕಾಡೆಮಿ
ಕನ್ನಡ ಭವನ, ಜೆ.ಸಿ.ರಸ್ತೆ
ಬೆಂಗಳೂರು-೦೨

೧೦ ದಲಿತ ಬಂಡಾಯ ಸಾಹಿತ್ಯ ಸಿದ್ಧಾಂತದ ನೆಲೆಗಳು : ಡಾ.ಮ.ನ.ಜವರಯ್ಯ
ಪ್ರ.ಬಹುಜನ ಮಾಧ್ಯಮ ಕೇಂದ್ರ (ರಿ)
ನಂ.ಎಂ.೧೩, ೨ನೇ ಕ್ರಾಸ್
೨ನೇ ಮುಖ್ಯ ರಸ್ತೆ, ೨ನೇ ಹಂತ
ಇ ಅಂಡ್ ಎಫ್ ಬ್ಲಾಕ್, ರಾಮಕೃಷ್ಣನಗರ
ಮೈಸೂರು-೨೨

೧೧ ಸಾಹಿತ್ಯ ಸಂಸ್ಕೃತಿ ಮತ್ತು ದಲಿತ ಪ್ರಜ್ಞೆ : ಡಾ.ಅರವಿಂದ ಮಾಲಗತ್ತಿ
ಕನ್ನಡ ಸಾಹಿತ್ಯ ಪರಿಷತ್ತು
ಪಂಪಮಹಾಕವಿ ರಸ್ತೆ
ಚಾಮರಾಜಪೇಟೆ, ಬೆಂಗಳೂರು-೧೮

೧೨ ಕುವೆಂಪು ಕಾದಂಬರಿಗಳು : ಸಂ.ಗುರುಪಾದ ಮರಿಗುದ್ದಿ (೨೦೦೪)
ಕರ್ನಾಟಕ ಸಾಹಿತ್ಯ ಅಕಾಡೆಮಿ
ಕನ್ನಡ ಭವನ, ಜೆ.ಸಿ.ರಸ್ತೆ
ಬೆಂಗಳೂರು-೦೨

೧೩ ಅನುಸಂದಾನ : ನರಹಳ್ಳಿ ಬಾಲಸುಬ್ರಮಣ್ಯ (೧೯೮೧)
ನೇತ್ರ ಪ್ರಿಂಟರ್ಸ್, ೭ನೇ ರಸ್ತೆ
ಚಾಮರಾಜಪೇಟೆ, ಬೆಂಗಳೂರು-೧೮

೧೪ ಕುವೆಂಪು : ಡಾ.ಪ್ರಧಾನ ಗುರುದತ್ತ (೨೦೦೧)
ನವ ಕರ್ನಾಟಕ ಪಬ್ಲಿಕೇಷನ್ ಪ್ರೈವೆಟ್
ಲಿಮಿಟೆಡ್
ಎಂಜಿನ ಸೆಂಟರ್, ಕ್ರೆಸೆಂಟ್ ರಸ್ತೆ
ಬೆಂಗಳೂರು-೧೭

೧೫ ಕುವೆಂಪು ಯುಗ : ಕೆ.ಎಸ್.ಭಗವಾನ್ (೧೯೯೦)
ಸಹ್ಯಾದ್ರಿ ಪ್ರಕಾಶನ

೧೬ ಷಷ್ಟಿ ಸಂಪದ : ಡಾ.ರಾಗೌ (೨೦೦೫)
ಸಂವಹನ ೧೨/೧ಎ, ಈರ್ವಿಂಗ್ ಬಜಾರ್
ಹಿಂಭಾಗ
ಶಿವರಾಂಪೇಟೆ, ಮೈಸೂರು-೦೧

೧೭ ಕುವೆಂಪು ಪುನರಾಲೋಕನ : ಜಿ.ಎಸ್.ಶಿವರುದ್ರಪ್ಪ (೨೦೦೫)
ಅಂಕಿತ ಪುಸ್ತಕ
೫೩ ಶ್ಯಾಮಸಿಂಗ್ ಕಾಂಪ್ಲೆಕ್ಸ್
ಬಸವನಗುಡಿ, ಬೆಂಗಳೂರು-೦೪

೧೮ ಕುವೆಂಪು ಕಾದಂಬರಿ ಎರಡು ಅಧ್ಯಯನಗಳು : ಟಿ.ಪಿ.ಅಶೋಕ
ಅಕ್ಷರ ಪ್ರಕಾಶನ
ಹೆಗ್ಗೋಡು ಸಾಗರ
ಕರ್ನಾಟಕ-೧೭

೧೯ ಶಿವರಾಮ ಕಾರಂತ : ಮಾಲಿನಿ ಮಲ್ಯ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್
ಲಿಮಿಟೆಡ್
ಎಂಬೆಸಿ ಸೆಂಟರ್
ಕ್ರೆಸೆಂಟ್ ರಸ್ತೆ, ಬೆಂಗಳೂರು-೦೧

೨೦ ಡಾ. ಶಿವರಾಮ ಕಾರಂತರ ಕಾದಂಬರಿಗಳಲ್ಲಿ ಮಾನವೀಕರಣದ ನೆಲೆಗಳು : ಡಾ.ರೇವಯ್ಯ ಒಡೆಯರ್
ಕನ್ನಡ ಸಾಹಿತ್ಯ ಪರಿಷತ್ತು
ಬೆಂಗಳೂರು-೧೮

೨೧ ಕಾರಂತರ ಕಾದಂಬರಿಗಳು : ಮಾಧವ ಕುಲಕರ್ಣಿ
ತನುಮನು ಪ್ರಕಾಶನ
ತೃಪ್ತಿ ೪೨, 'ಜಿ'ಬ್ಲಾಕ್, ೩ನೇ ತಿರುವು
ರಾಮಕೃಷ್ಣನಗರ, ಮೈಸೂರು-೨೩

೨೨ ಕಾರಂತ ಚಿಂತನೆ ಕಡಲಾಚೆಯ ಕನ್ನಡಿಗರಿಂದ : ಸಂ.ನಾಗ ಐತಾಳ
ಅಕ್ಷರ ಪ್ರಕಾಶನ, ಹೆಗ್ಗೋಡು
ಸಾಗರ, ಕರ್ನಾಟಕ-೧೭

೨೩ ಪ್ರಾಸಂಗಿಕ : ಹೆಚ್.ಎಂ.ಚೆನ್ನಯ್ಯ (೧೯೮೩)
ನೆಲಮನೆ ಪ್ರಕಾಶನ
ಮೈಸೂರು-೧೪

೨೪ ಕುವೆಂಪು ವ್ಯಕ್ತಿತ್ವ ಮತ್ತು ಸಾಹಿತ್ಯ : ಪ್ರ.ಸಂ.ಪ್ರೊ.ದೇ.ಜವರೇಗೌಡ
ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮಿಪುರಂ, ಮೈಸೂರು-೧೨